ಶ್ರೀರಾಜರಾಜೇಶ್ವರತೀರ್ಥಕೃತ

# ಮಂಗಲಾಷ್ಟಕಮ್



ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನ

# ಶ್ರೀವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.)

'Pajaka', 89 24, III Cross, Mount Joy Road, Hanumanthanagar, Bangalore - 560 019
Website: www.vyasamadhwa.org Ph:26602802 --- Email: info@vyasamadhwa.org

## ಸಂಸ್ಥೆಯ ಪ್ರಮುಖ ಯೋಜನೆಗಳು

1. ಪ್ರಾಚೀನ ಸಂಸ್ಕೃತ ಹಸ್ತಪ್ರತಿಗ್ರಂಥಗಳನ್ನು ಸಂಗ್ರಹಿಸಿ, ವ್ಯವಸ್ಥಿತವಾಗಿ ಸಂರಕ್ಷಿಸುವುದು; ಈಗಾಗಲೇ 2000ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ, ತನ್ನ 'ಶ್ರೀಜಯತೀರ್ಥ ಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ'ದಲ್ಲಿ ಸಂರಕ್ಷಿಸುತ್ತಿದೆ.
2. ಶ್ರೀವ್ಯಾಸಮಧ್ವರ ಕೃತಿಗಳ ಅನುವಾದ ಹಾಗೂ ವಿವರಣೆಗಳನ್ನೊಳಗೊಂಡ ಕೃತಿಗಳನ್ನು, ಹರಿದಾಸಸಾಹಿತ್ಯವನ್ನು ಪ್ರಕಾಶನಪಡಿಸುವುದು (ಐತರೇಯಪ್ರಕಾಶನ); ಈಗಾಗಲೇ 40000 ಪುಟಗಳಿಗೂ ಮೀರಿದ ಸಾಹಿತ್ಯವನ್ನು ಸಂಸ್ಕೃತ, ಕನ್ನಡ, ಆಂಗ್ಲ ಹಾಗೂ ತೆಲುಗು ಭಾಷೆಗಳಲ್ಲಿ ಪ್ರಕಾಶನ ಪಡಿಸಲಾಗಿದೆ.
3. 'ಶ್ರೀರಾಘವೇಂದ್ರ ವೇದಾಂತಪಾಠಶಾಲಾ' ಎಂಬ ಸಂಸ್ಥೆಯನ್ನೂ ಪ್ರಾರಂಭಿಸಿ, ಪ್ರತಿನಿತ್ಯ ಸರ್ವ-ಮೂಲಗ್ರಂಥಗಳ ಪಾಠ-ಪ್ರವಚನ, ಸ್ತೋತ್ರಪಾಠ ಇತ್ಯಾದಿಗಳನ್ನು ಅನೇಕ ವರ್ಷಗಳಿಂದ ನಿರಂತರ ನಡೆಸುತ್ತಾ ಬಂದಿದೆ.
4. 'ಶ್ರೀವ್ಯಾಸಮಧ್ವಸೇವಾಪುರಸ್ಕಾರ ಯೋಜನೆ': ಶ್ರೀವ್ಯಾಸಮಧ್ವರ ಸೇವೆ ಸಲ್ಲಿಸಿದ ವೃದ್ಧ ವಿದ್ವಾಂಸರಿಗೆ ಪ್ರತಿತಿಂಗಳು ಮಾಸಿಕ ಗೌರವಧನವನ್ನು ಆಜೀವ ಸಲ್ಲಿಸುವುದು; ಪ್ರಕೃತ 26 ವಿದ್ವಾಂಸರಿಗೆ ರೂ.1500/-ಗಳನ್ನು ಸಲ್ಲಿಸುತ್ತಿದೆ.
5. ಶ್ರೀವ್ಯಾಸಮಧ್ವರ ಕೃತಿಗಳನ್ನು ಅಧ್ಯಯನ ಮಾಡುತ್ತ, ಲೌಕಿಕ ವಿದ್ಯೆಯ ವ್ಯಾಸಂಗ ಮಾಡುತ್ತಿರುವ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಆರ್ಥಿಕಸಹಾಯ ನೀಡುವುದು.
6. ಪ್ರತಿವರ್ಷ ಒಬ್ಬ ಶ್ರೇಷ್ಠ ಹಿರಿಯ ವಿದ್ವಾಂಸರಿಗೆ ರೂ.12,000/-ಗಳ 'ಶ್ರೀವ್ಯಾಸಮಧ್ವಸೇವಾಪ್ರಶಸ್ತಿ'.
7. ಮಹಾಭಾರತತಾತ್ಪರ್ಯನಿರ್ಣಯವನ್ನು ಪೂರ್ಣ ಕಂಠಪಾಠ ಒಪ್ಪಿಸುವ ವಿದ್ಯಾರ್ಥಿಗೆ ರೂ.25,000/- ಪ್ರಶಸ್ತಿ, ಸುಮಧ್ವವಿಜಯವನ್ನು ಒಪ್ಪಿಸುವ ವಿದ್ಯಾರ್ಥಿಗೆ 'ಶ್ರೀಮಧ್ವಪ್ರಿಯ' ಪ್ರಶಸ್ತಿ, ಹಾಗೂ ಹರಿಕಥಾಮೃತಸಾರವನ್ನು ಒಪ್ಪಿಸುವ ವಿದ್ಯಾರ್ಥಿನಿಗೆ 'ದಾಸಪ್ರಿಯ' ಪ್ರಶಸ್ತಿಪ್ರದಾನ.
8. ಶ್ರೀವ್ಯಾಸಮಧ್ವರನ್ನು ಹಾಗೂ ಅವರ ಕೃತಿಗಳನ್ನು ಕುರಿತ ಸಂಶೋಧನ ಕೃತಿಗಳ ಪ್ರಕಾಶನಕ್ಕೆ ಆರ್ಥಿಕ ಸಹಾಯ.
9. ಯುವಜನತೆಯಲ್ಲಿ ತಾತ್ತ್ವಿಕ ಜಾಗೃತಿಯನ್ನು ಉಂಟು ಮಾಡಲು ಕಾಲಕಾಲಕ್ಕೆ ಶ್ರೀವ್ಯಾಸಮಧ್ವರ ತತ್ತ್ವಗಳ ಬಗ್ಗೆ ಕಾರ್ಯಾಗಾರಗಳನ್ನು, ವಿಚಾರಸಂಕಿರಣಗಳನ್ನು ಮತ್ತು ವಿದ್ವದ್ಗೋಷ್ಠಿಗಳನ್ನು ಏರ್ಪಡಿಸುವುದು.

ಅಪಾರವೆಚ್ಚದ ಈ ಎಲ್ಲ ಯೋಜನೆಗಳಿಗಾಗಿ ಪ್ರತಿಷ್ಠಾನವು ಯಾವುದೇ ರೀತಿಯ ದೇಣಿಗೆಯನ್ನು ಆಸ್ತಿಕಜನತೆಯಿಂದ ಸ್ವಾಗತಿಸುತ್ತದೆ. ರೂ.15,000/- ಹಾಗೂ ಅದಕ್ಕಿಂತ ಹೆಚ್ಚಿನ ಮೊತ್ತದ ದೇಣಿಗೆಯನ್ನು ನೀಡುವವರಿಗೆ ಸರ್ವಮೂಲಗ್ರಂಥಗಳು, ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಹರಿಕಥಾಮೃತಸಾರಗಳ ಅನುವಾದಗಳು ಸೇರಿದಂತೆ ಪ್ರತಿಷ್ಠಾನದ ಪ್ರಕಾಶನದಲ್ಲಿ ಲಭ್ಯವಿರುವ ಎಲ್ಲಾ ಗ್ರಂಥಗಳನ್ನು ಉಚಿತವಾಗಿ ನೀಡಲಾಗುವುದು.

ವಿ.ಸೂ.:

1. ದೇಣಿಗೆಗಳನ್ನು "ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನ(ರಿ.)"S/B A/c No. 0472101031491, Canara Bank Hanumanthanagar Branch, ಬೆಂಗಳೂರು ಅಥವಾ "Sri Vyasa Madhwa Research Foundation (R), S/B A/c No. 0472101044870, Canara Bank Hanumanthanagar Branch, ಬೆಂಗಳೂರು" - IFSC Code CNRB 0000472 ಈ ಹೆಸರಿಗೆ ನಗದು / ಚೆಕ್ /ಡ್ರಾಫ್ಟ್ ಮೂಲಕ ಸಲ್ಲಿಸಿ ಅಧಿಕೃತ ರಸೀತಿಯನ್ನು ಪಡೆಯತಕ್ಕದ್ದು.
2. ಎಲ್ಲ ಬಗೆಯ ದೇಣಿಗೆಗಳಿಗೂ 80ಜಿ ಅನ್ವಯ ಆದಾಯ ತೆರಿಗೆ ವಿನಾಯಿತಿ ಸೌಲಭ್ಯವಿರುತ್ತದೆ.



ಶ್ರೀರಾಜರಾಜೇಶ್ವರತೀರ್ಥಕೃತ -

# ಶ್ರೀಮಂಗಲಾಷ್ಟಕಮ್

(ಅನುವಾದ, ವಿವರಣೆ, ಶ್ರೀಹರಿಗುರುಗಳ ಮಂಗಲಾಷ್ಟಕಗಳು

ಹಾಗೂ ಪ್ರಾತಃಸ್ತೋತ್ರಗಳ ಸಮೇತ)


ಸಂಕಲನ, ಸಂಪಾದನೆ, ಅನುವಾದ, ವಿವರಣೆ :

**ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ**



ಪ್ರಕಾಶನ :

**ಐತರೇಯ ಪ್ರಕಾಶನ ವ್ಯಾಸನಕೆರೆ**

ಶ್ರೀವ್ಯಾಸಮಧ್ವಸಂಶೋಧನ ಪ್ರತಿಷ್ಠಾನದ ಪ್ರಕಾಶನ ವಿಭಾಗ

'ಪಾಜಕ', ೮೯/೨೪, ೩ನೇ ಮುಖ್ಯರಸ್ತೆ, ಮೌಂಟ್‌ಜಾಯ್ ಎಕ್ಸ್‌ಟೆನ್ಷನ್,

ಹನುಮಂತನಗರ, ಬೆಂಗಳೂರು - ೫೬೦ ೦೧೯.

**Śrī Maṅgalāṣṭakam of Śrī Rājarājeśvaratīrtha (with other Vaiṣṇava Maṅgalāṣṭakas and Prātah Stotras** : (Compiled, translated by Vidyāvācaspati, Darśanaratnam, Pravacanācārya, Sacchāstravicakṣaṇaratnam, Śāstrapravacanakesari, Madhvamatavardhana, Vidvaccūḍāmaṇi, Vedavidyā vicakṣaṇa, Paṇḍitaratnam, Vidyāvāridhi, Sacchāstrapravacanapravīṇa, Gītā-ratnākara, Tattvavācaspati, Jnānaratnākara (and Recipient of Karnataka State Sanskrit Award-1999 & **Karnataka Rajyotsava Award-2002, Śrī Vidyāmānya Mahāpraśasti** of Śrī Pejavar Math, Udupi and **Rashtrapati Award - 2005**) **Dr.Vyasanakere Prabhanjanacharya**, M.A., Ph.D., D.Litt., Principal (Rtd.), Govt. First Grade College, K.R.Puram, Bangalore and Published by **Aitareya Prakāśana Vyasanakere**, Publication wing of **Śrī VyāsaMadhva Samśodhana Pratiṣṭhāna(R)**, 'Pājaka', No.89/24, Third Cross, Mount Joy Extension, Hanumanthanagar, Bangalore - 560019. Pages: 16 + 128 = 144

Phone : (080) 26611011 ; 26602802.

MAṄGALĀṢṬAKAM

ISBN NO. 978-93-81826-75-1

Internet : www.vyasamadhwa.org

E-mail : info@vyasamadhwa.org



First Edition : 2017

Price : Rs.50/-

Typeset by :
**Śrī Vyāsa Madhva Samśodhana Pratiṣṭhāna(Regd),**

Printed at :
**Vāgartha**, N.R. Colony, Bangalore, Ph: 22427677

# ವಿಷಯಾನುಕ್ರಮಣಿಕೆ

*****

# ಮುನ್ನುಡಿ

ಸಂಸ್ಕೃತ ಸಾಹಿತ್ಯ ಅಗಾಧವಾದುದು; ಅಪೌರುಷೇಯವಾದ ವೈದಿಕಸಾಹಿತ್ಯದಿಂದ ಹಿಡಿದು ಸ್ತೋತ್ರ-ಮುಕ್ತಕಗಳವರೆಗೆ ಅದರ ವ್ಯಾಪ್ತಿ ಹರಡಿದೆ. ವೈದಿಕಸಾಹಿತ್ಯವು ಮಂತ್ರ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತೆಂದು ಮುಖ್ಯವಾಗಿ ನಾಲ್ಕು ಬಗೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬುದಾಗಿ ನಾಲ್ಕು ವೇದಗಳು. ವೇದಗಳ ಶಾಖೆಗಳು ಸಾವಿರಾರು. ಒಟ್ಟಾಗಿ ಅದು ಅನಂತ ಎಂದೇ ಅದರ ಮಾತು: 'ಅನಂತಾ ವೈ ವೇದಾಃ'. ಅನಂತರದ ಸ್ಥಾನ ಇತಿಹಾಸಪುರಾಣಗಳದು. ಮೂಲರಾಮಾಯಣ, ಪಂಚರಾತ್ರ ಹಾಗೂ ಮಹಾಭಾರತ ಈ ಮೂರು ಇತಿಹಾಸಗಳು. ಶ್ರೀಮದ್ಭಾಗವತಾದಿಗಳು ಪುರಾಣಗಳು. ಅವು ಸಹ ಮಹಾಪುರಾಣ ಮತ್ತು ಉಪಪುರಾಣ ಎಂಬುದಾಗಿ ಎರಡು ಬಗೆ. ಮಹಾಪುರಾಣಗಳು ೧೮, ಅದರಂತೆ ಉಪಪುರಾಣಗಳು ಸಹ ಹದಿನೆಂಟು. ಅನಂತರದ ಸಾಹಿತ್ಯ ಸ್ಮೃತಿಗಳು. ಮನುಸ್ಮೃತಿ ಮೊದಲಾದ ಅನೇಕ ಸ್ಮೃತಿಗಳು ಉಪಲಬ್ಧವಿವೆ. ಮನುಸ್ಮೃತಿ ಕೃತಿರಾಜವೆಂದೇ ಪ್ರಸಿದ್ಧವಾದ ಕೃತಿ. ಬ್ರಹ್ಮಮೀಮಾಂಸೆ, ದೈವೀಮೀಮಾಂಸೆ ಹಾಗೂ ಕರ್ಮಮೀಮಾಂಸೆ ಈ ಮೂರು ವೈದಿಕ ಮೀಮಾಂಸೆಗಳು. ವ್ಯಾಕರಣಸೂತ್ರ ಮೊದಲಾದವುಗಳು ಅನಂತರದವು. ಸಾಹಿತ್ಯಪ್ರಪಂಚದಲ್ಲಿ ಶ್ರವ್ಯ, ದೃಶ್ಯ ಮತ್ತು ಚಂಪೂ ಎಂಬುದಾಗಿ ಮೂರು ಬಗೆ. ಶ್ರವ್ಯವು ಸಹ ಮಹಾಕಾವ್ಯ, ಖಂಡಕಾವ್ಯ ಎಂದು ಎರಡು ಬಗೆ; ದೃಶ್ಯಕಾವ್ಯವು ಹತ್ತು ಬಗೆಯದು; ಚಂಪೂಕಾವ್ಯವು ಗದ್ಯ-ಪದ್ಯಗಳ ಸಂಗಮ. ಸಾಹಿತ್ಯವು ಸಹ ಇತಿಹಾಸ-ಪುರಾಣಗಳನ್ನು ಆಧರಿಸಿದ ಸಾಹಿತ್ಯವು ಒಂದು ಬಗೆಯದಾದರೆ, ಐತಿಹಾಸಿಕದ ಸಾಲಿಗೆ ಸೇರುವುದು ಮತ್ತೊಂದು ಬಗೆ. ರಾಜಕೀಯವಾದ ಕೃತಿಗಳು ಸಹ ಉಂಟು.

ಸ್ತೋತ್ರಸಾಹಿತ್ಯ ಸಂಸ್ಕೃತದ ಮತ್ತೊಂದು ವಿಶಿಷ್ಟ ಪ್ರಾಕಾರ. ವೈದಿಕಸೂಕ್ತಗಳಿಂದ ಪ್ರಾರಂಭಿಸಿ ಪೌರುಷೇಯ ಸಾಹಿತ್ಯದ ಗುರುಸ್ತುತಿಗಳವರೆಗೆ ಇವುಗಳ ವ್ಯಾಪ್ತಿ ಹಬ್ಬಿದೆ. ವೈಷ್ಣವಸ್ತೋತ್ರಸಾಹಿತ್ಯವಂತು ಭಗವತ್ ಕೇಂದ್ರಿತವಾಗಿ ಗಳಿಸಿರುವ ಸ್ಥಾನ ಅಪೂರ್ವವಾದುದು. ಸಹಸ್ರಸಂಖ್ಯೆಯಲ್ಲಿ ಸ್ತೋತ್ರಕೃತಿಗಳು ಇಂದು ಉಪಲಬ್ಧವಿವೆ. ಇವುಗಳಲ್ಲೂ ಸಹ ಸ್ತೋತ್ರಗಳು, ಅಷ್ಟಕಗಳು, ಸಹಸ್ರನಾಮಗಳು, ಅಷ್ಟೋತ್ತರಶತನಾಮಸ್ತೋತ್ರಗಳು, ಬಗೆಬಗೆಯ ಭಗವನ್ಮೂರ್ತಿಯನ್ನು ಕುರಿತ ಸ್ತೋತ್ರಗಳು, ದಶಾವತಾರ- ಸ್ತೋತ್ರಗಳು, ಅನಂತರ ಗುರುಸ್ತೋತ್ರಗಳು. ಗುರುಸ್ತೋತ್ರಗಳಲ್ಲೂ ಶ್ರೀವಾಯುದೇವರ ತೃತೀಯಾವತಾರರಾದ ಮಧ್ವಾಚಾರ್ಯರನ್ನು ಕುರಿತ ಸ್ತೋತ್ರಗಳ ಸಂಖ್ಯೆ ಅಪಾರ. ಅನಂತರವೂ ಪರಂಪರೆಯಲ್ಲಿ ಬಗೆಬಗೆಯ ಸ್ತೋತ್ರಗಳು ಕಾಲಕಾಲಕ್ಕೆ ರಚಿತವಾಗಿವೆ. ಭಾಷೆಯೊಂದಿಗೆ ಪ್ರಮೇಯದ ಪರಿಜ್ಞಾನವೂ ಆಗಿ, ಭಕ್ತಿ ಅಭಿವೃದ್ಧಿಗೊಳ್ಳುವುದು ಇವುಗಳ ಪ್ರಯೋಜನ

ಅಷ್ಟಕಗಳು ವಿಶಿಷ್ಟ ರೀತಿಯ ರಚನೆಗಳು. ಕೇವಲ ಎಂಟು ಶ್ಲೋಕಗಳ ವ್ಯಾಪ್ತಿಯಲ್ಲಿ ಅವು ಬೀರುವ ಪ್ರಭಾವ ಅಪೂರ್ವವೆನ್ನಿಸುವಂತಹುದು. ಮಂಗಲಾಷ್ಟಗಳು ಇನ್ನೊಂದು ಬಗೆಯವು; ಅವುಗಳ ಕೇವಲ ಶ್ರವಣ ಶ್ರೋತೃಗಳಲ್ಲಿ ಪುಲಕ ಉಂಟುಮಾಡುವುದು.

ಸಂಸ್ಕೃತದಲ್ಲಿ ಅಷ್ಟಕಗಳೂ ಇವೆ; ಮಂಗಲಾಷ್ಟಕಗಳೂ ಇವೆ. ವೈಷ್ಣವ ಮಂಗಲಾಷ್ಟಕಗಳ ಸ್ಥಾನ ಇನ್ನೂ ವಿಶಿಷ್ಟ ರೀತಿಯದು. ಅವುಗಳಲ್ಲಿ ಹೊರಹೊಮ್ಮುವ ಭಕ್ತಿ, ಭಾವ ಹೊಸ ಪ್ರಪಂಚವನ್ನೇ ಸೃಷ್ಟಿಸುವುದು. ಇಂತಹ ಮಂಗಲಾಷ್ಟಕಗಳಿಗೆ ಪುರಾಣಗಳಲ್ಲೇ ಉದಾಹರಣೆಗಳು ದೊರೆಯುವವು. ಗರುಡ ಪುರಾಣ ಬ್ರಹ್ಮಕಾಂಡದಲ್ಲಿ ಅಂತಹ ಅನೇಕ ಶ್ಲೋಕಗಳಿವೆ. ಶ್ರೀಮದಾಚಾರ್ಯರ ದ್ವಾದಶ-ಸ್ತೋತ್ರದ ಶ್ರೀಸ್ತುತಿ ಒಂದು ಅಪೂರ್ವ ಅಷ್ಟಕ. ಅದರ ಹಿನ್ನೆಲೆಯಲ್ಲಿ ಅನಂತರ ಅಪಾರ ಸಂಖ್ಯೆಯಲ್ಲಿ ಅಷ್ಟಕಗಳು ರಚಿತವಾಗಿವೆ. ಮಂಗಲಾಷ್ಟಕಗಳಿಗೂ ಅದೇ ಮೂಲ ಎನ್ನಬಹುದು.

## ಮಂಗಲಾಷ್ಟಕ

ಪ್ರಸ್ತುತ ಮಂಗಲಾಷ್ಟಕ ತೀರಾ ವಿಶಿಷ್ಟ ಬಗೆಯದು. ಶ್ರೀಹರಿಯ ಮಾಹಾತ್ಮ್ಯ ಇದರ ಕೇಂದ್ರ ಬಿಂದು. ಅದನ್ನು ದೇವತಾಸ್ತೋತ್ರ, ಋಷಿಸ್ತೋತ್ರ, ರಾಜರಸ್ತೋತ್ರ, ಪರ್ವತಗಳ ಸ್ತೋತ್ರ, ನದೀಸ್ತೋತ್ರ, ಶಾಸ್ತ್ರಪ್ರಪಂಚದ ಸ್ತೋತ್ರ, ಗ್ರಹಾದಿಗಳ ಸ್ತೋತ್ರದೊಂದಿಗೆ ಸಂಯೋಜಿಸಿ ಶ್ರೀಹರಿಯ ಪಾರಮ್ಯವನ್ನು ನಿರೂಪಿಸುವ ಇಲ್ಲಿಯ ಕೌಶಲ ಅದ್ಭುತವಾದುದು, ಅಪಾರವಾದುದು. ಈ ಬಗೆಯ ಮತ್ತೊಂದು ಮಂಗಲಾಷ್ಟಕ ಕಾಣಸಿಗದು.

ಇದರಲ್ಲಿ ದೇವತೆಗಳು, ರಾಜರು ಮೊದಲಾದವರ ಸ್ತೋತ್ರಗಳ ಜೋಡಣೆಗೆ ಮೂಲಭೂತ ಆಧಾರವೆನ್ನಿಸುವಂತಹುದು, ಶ್ರೀಮಹಾಭಾರತದ ಅನುಶಾಸನಪರ್ವದಲ್ಲಿ ಬರುವ ಎರಡು ವಿಶಿಷ್ಟ ಅಧ್ಯಾಯಗಳದು. ಪ್ರಶ್ನೆ ಧರ್ಮರಾಜನದು, ಉತ್ತರ ಭೀಷ್ಮಾಚಾರ್ಯರದು. ಸಕಲ ಆಪತ್ತುಗಳ ಪರಿಹಾರ ಹಾಗೂ ಸಂಪತ್ತು ಪ್ರಾಪ್ತಿಯ ಉಪಾಯ ಧರ್ಮರಾಜನ ಪ್ರಶ್ನೆಯ ಹಾರ್ದ. ಅದಕ್ಕೆ ದೇವತೆಗಳ, ಋಷಿಗಳ, ಮುನಿಗಳ, ರಾಜರ, ನದಿ-ಪರ್ವತಗಳ, ಗ್ರಹ-ನಕ್ಷತ್ರಾದಿಗಳೆಲ್ಲ ಭಗವಂತನ ನಿಯಂತ್ರಣಕ್ಕೊಳಪಟ್ಟವುಗಳು ಎಂಬ ಚಿಂತನೆ ಶ್ರೇಷ್ಠವೂ, ಶಾಶ್ವತವೂ ಆದ ಪರಿಹಾರ ಎಂಬುದು ಭೀಷ್ಮರ ಉತ್ತರದ ಸಾರ. ಒಟ್ಟು ೧೪೪ ಶ್ಲೋಕಗಳಲ್ಲಿ ನಿರೂಪಿತವಾಗಿರುವ ವಿವರಣೆಗಳನ್ನು ಅಡಕವಾಗಿ ವಿವರಿಸುವುದು ಈ ಮಂಗಲಾಷ್ಟಕದ ಮಹಿಮೆ. ನಮ್ಮ ಭರತಖಂಡಕ್ಕೆ ಸಂಬಂಧಿಸಿದ ಅಪೂರ್ವ ಮಾಹಿತಿಗಳನ್ನು ಹೀಗೆ ಚಿಂತನೆಗೆ ಅಳವಡಿಸಿರುವ

ಈ ಕೃತಿಯ ರಚನಾಕೌಶಲ ತುಂಬಾ ಅಪೂರ್ವ. ನಮ್ಮ ಸಾಧನೆಗಿರುವ ಅವಕಾಶ, ಸಾಧನೆಯ ಸ್ವರೂಪ, ಸಿದ್ಧಿಯ ಹಿರಿಮೆ ಇವುಗಳ ಸ್ಮರಣೆ ಸದಾ ಒದಗುವಂತೆ ಮಾಹಿತಿಯನ್ನು ಸೆರೆಹಿಡಿದಿರುವ ರೀತಿ ಅನನ್ಯವೆನ್ನಿಸುವಂತಹುದು. ರಾಷ್ಟ್ರಗೀತೆ ರಾಷ್ಟ್ರಕ್ಕೆ ಸಂಬಂಧಿಸಿದಂತೆ ಇದ್ದರೆ, ಇದು ನಿಜ ಅರ್ಥದಲ್ಲಿ ವಿಶ್ವಗೀತೆಯೇ ಆಗಿದೆ ಎನ್ನಬಹುದು.

## ಶ್ರೀರಾಜರಾಜೇಶ್ವರತೀರ್ಥರು

ಈ ಮಂಗಲಾಷ್ಟಕ ಕೃತಿಯ ರಚನೆ ಶ್ರೀರಾಜರಾಜೇಶ್ವರತೀರ್ಥರದು. ಉಡುಪಿ ಅಷ್ಟಮಠಗಳಲ್ಲಿ ಅಷ್ಟೋತ್ಕೃಷ್ಟ ಎಂಬ ಪ್ರಸಿದ್ಧಿಗೆ ಪಾತ್ರವಾಗಿರುವ ಮಠ ಶ್ರೀಪಲಿಮಾರುಮಠ. ಅದರ ಮೂಲಯತಿಗಳು ಶ್ರೀಹೃಷೀಕೇಶತೀರ್ಥರು. ಶ್ರೀಮದಾಚಾರ್ಯರಿಂದ ನಡೆಯುತ್ತಿದ್ದ ಶ್ರೀಮದ್ಭಾಗವತಾದಿಗ್ರಂಥಗಳ ಪ್ರವಚನ ಕಾಲದಲ್ಲಿ ಮೂಲಶ್ಲೋಕಗಳನ್ನು ಹಾಡುವ ಸೌಭಾಗ್ಯ ಈ ಮಹನೀಯರದಾಗಿತ್ತು[೧]. ಅವರ ಕಂಠಸಿರಿ ಶ್ರೀಮದಾಚಾರ್ಯರ ಕಂಠಸಿರಿಗೆ ಸೂಕ್ತರೀತಿಯಲ್ಲಿ ಹೊಂದಿಕೆಯಾಗುತ್ತಿತ್ತು ಎಂಬ ವಿಶಿಷ್ಟ ಮಾಹಿತಿ ಸುಮಧ್ವವಿಜಯದಲ್ಲಿದೆ. ಪ್ರಾಯಃ ವಯಸ್ಸಿನಲ್ಲೂ, ಆಶ್ರಮಕ್ರಮದಲ್ಲೂ ಅಷ್ಟಮಠದ ಯತಿಗಳಲ್ಲಿ ಇವರೇ ಹಿರಿಯರು. ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳನ್ನು ಸಮಗ್ರವಾಗಿ ಲೇಖನ ಮಾಡಿದ ಸಾಧನೆಯೂ ಇವರ ಹೆಸರಿನಲ್ಲಿದೆ[೨]. ಅವರ ಶಿಷ್ಯರು ಶ್ರೀಸಮಾತ್ಮೇಶತೀರ್ಥರು, ಶ್ರೀಸಂಭವತೀರ್ಥರು, ಶ್ರೀಅಪರಾಜಿತತೀರ್ಥರು, ಶ್ರೀವಿದ್ಯಾಮೂರ್ತಿತೀರ್ಥರು, ಇವರು ಕ್ರಮವಾಗಿ ಆ ಪೀಠವನ್ನಲಂಕರಿಸಿದ ಯತಿಗಳು[೩]. ಶ್ರೀರಾಜರಾಜೇಶ್ವರತೀರ್ಥರು

---

೧. ಅವದತ್ ಸ ಕಥಾಂ ರಥಾಂಗಪಾಣೇರ್ಭಗವಾನ್ ಭಾಗವತೇ ಭವಾಪಹಂತ್ರೀಮ್ ।
ಅನುಕೂಲಗುಣಸ್ವರಾದಿಭಾಜಾ ನಿಜಶಿಷ್ಯಪ್ರವರೇಣ ವಾಚ್ಯಮಾನೇ ॥
ಕಥನಂ ತದುದಾರಧೈರ್ಯಸಾರಂ ಮಧುರಂ ಪುಷ್ಕಲಭಾವವತ್ ಪ್ರಸನ್ನಮ್ ।
ವಿದುಷೋಽವಿದುಷೋಽಪಿ ಶೃಣ್ವತೋಽಲಂ ವ್ಯಧಿತಾನಂದರಸಾಂಬುಧೌ ನಿಮಗ್ನಾನ್ ॥
– ಸುಮಧ್ವವಿಜಯ (೧೩/೪೦,೪೧)
– ನಿಜಶಿಷ್ಯಪ್ರವರೇಣ – ಹೃಷೀಕೇಶತೀರ್ಥೇನ – ಭಾವಪ್ರಕಾಶಿಕಾ

೨. ಅತ್ರೈವಂ ಶ್ರೀಮದ್ಧಷೀಕೇಶತೀರ್ಥೀಯಧಾತುಪಾಠಸಂಗ್ರಹಃ।
– ಶ್ರೀವಿಜಯಧ್ವಜತೀರ್ಥರು (ಭಾಗವತಪದರತ್ನಾವಲೀ ೫-೫-೨೦)
(ಇತಿ) ಶ್ರೀಮದುಡುಪೀ ಶ್ರೀಕೃಷ್ಣಪದಪದ್ಮಾರಾಧಕಹೃಷೀಕೇಶಶ್ರೀಮಚ್ಚರಣೈಃ ಶ್ರೀಮಧ್ವರಾಜಮುಖ-ಕಮಲಾಚ್ಛೃತ್ವಾ ಲಿಖಿತಮೇತದ್ಧಾತುವ್ಯಾಖ್ಯಾನಮಿತಿ ತತ್ಸಂಪ್ರದಾಸಾಭಿಜ್ಞೋಕ್ತಮುಖಾಚ್ಛೃತ್ವಾ ಕೃತೇಯಂ ಲೇಖಾ.... – ಶ್ರೀಸತ್ಯಧರ್ಮತೀರ್ಥರು, ಭಾಗವತಟಿಪ್ಪಣೀ (೧೦/೪/೧೪)

೩. ವಿದ್ಯಾಮೂರ್ತಿತೀರ್ಥ: ಪರಂಪರೆಯಲ್ಲಿ ಐದನೆಯವರು ವಿದ್ಯಾಮೂರ್ತಿತೀರ್ಥರು. ಇವರು ಗುರುಗಳು ತನಗಿಟ್ಟ ಹೆಸರನ್ನು ತನ್ನ ಪಾಂಡಿತ್ಯದ ಗರಿಮೆಯಿಂದ ಸಾರ್ಥಕಪಡಿಸಿಕೊಂಡ ಘನ ವಿದ್ವಾಂಸರು. ಸ್ವಯಂ ಎಲ್ಲ ವಿದ್ಯೆಗಳ ಮೂರ್ತಿಯೆ ಆಗಿದ್ದರು. ಇನ್ನೂ ಒಂದು ವಿಶೇಷವೆಂದರೆ ಇವರು

ಶ್ರೀವಿದ್ಯಾಮೂರ್ತಿತೀರ್ಥರ ಶಿಷ್ಯರು. ಅವರಿಂದ ಸನ್ಯಾಸದೀಕ್ಷೆ ಪಡೆದವರಾದರೂ ಕಿರಿಯ ವಯಸ್ಸಿನಲ್ಲಿಯೇ ವೈಕುಂಠಯಾತ್ರೆ ಮಾಡಿದ್ದರಿಂದ ಪೀಠವನ್ನೇರಲಿಲ್ಲ.

ಶ್ರೀರಾಜರಾಜೇಶ್ವರತೀರ್ಥರ ಬಗ್ಗೆ ಕಾಂತಾವರದ ಪಲಿಮಾರುಮಠದಲ್ಲಿ ಒಂದು ಶಿಲಾಶಾಸನ ಲಭ್ಯವಿದೆ. ಆ ಕಾಂತಾವರದ ಮಠವು ಸಹ ಶ್ರೀರಾಜರಾಜೇಶ್ವರ ಯತಿಗಳಿಗೆ ಕಾಣಿಕೆಯಾಗಿ ಬಂದ ಮಠ. ಅಲ್ಲಿಯ ಕಾಂತೇಶ್ವರ ದೇವಸ್ಥಾನ ತುಂಬಾ ಪ್ರಖ್ಯಾತವಾದುದು[೧]. ಮೂವತ್ತಕ್ಕೂ ಹೆಚ್ಚು ಜನ ಪ್ರಯತ್ನಿಸಿದರೂ ಎತ್ತಲಾಗದ ಅದರ ಧ್ವಜಸ್ತಂಭವನ್ನು ಗಂಡವಾಟ (ಕೋಡಿಂಜಾಡಿ) ಎಂಬ ಜಟ್ಟಿ ಎತ್ತಿ ತಂದಿದ್ದನಂತೆ. ಅಂತಹ ಜಟ್ಟಿಗೂ ಶ್ರೀಮಧ್ವಾಚಾರ್ಯರ ಒಂದು ಬೆರಳನ್ನೂ ಅಲುಗಿಸಲಾಗಲಿಲ್ಲ, ಅವರ ಮೈಮೇಲಿನ ಒಂದು ರೋಮವನ್ನೂ ಕೀಳಲಾಗಲಿಲ್ಲ. ಶ್ರೀಮಧ್ವಾಚಾರ್ಯರ ಈ ಮಹಿಮೆ ಅವರ ಮಹಿಮಾದಿ ಸಿದ್ಧಿಗಳಿಗೆ ದ್ಯೋತಕ. ಜಗತ್ತಿಗೆ ಅವರ ಆ ಸಿದ್ಧಿಯ ಅರಿವು ಮೂಡಲು ಈ ಕಾಂತಾವರದ ಕ್ಷೇತ್ರ ಒಂದು ರೀತಿಯಲ್ಲಿ ನೆರವಾಗುವುದು ಎಂಬುದು ಗಮನಿಸಬೇಕಾದ ಸಂಗತಿ.

ಶ್ರೀರಾಜರಾಜೇಶ್ವರತೀರ್ಥರು ತಮ್ಮ ಅಪೂರ್ವ ಕಾವ್ಯಪ್ರತಿಭೆಗೆ ಹೆಸರಾದವರು. ಅವರ ರಾಮಸಂದೇಶ ಕೃತಿಯಲ್ಲಿನ ಉಪಸಂಹಾರಶ್ಲೋಕ ಒಂದರಲ್ಲಿ ಅವರೇ ನೀಡಿರುವ ವಿವರ ಹೀಗಿದೆ[೨]:

---

ಜಯತೀರ್ಥರ ಸಮಕಾಲಿಕರು; ಇಬ್ಬರ ವೃಂದಾವನಗಳೂ ಮಳಖೇಡದಲ್ಲಿ ಇವೆ. ಇವರ ಅಸಾಧಾರಣ ಪಾಂಡಿತ್ಯದ ಬಗ್ಗೆ ಮಠದ ದಾಖಲೆಗಳಲ್ಲಿ ಬಹಳವಾದ ಉಲ್ಲೇಖ ಉಂಟು; ದುರ್ವಾದಿಗಳನ್ನು ವಾದದಲ್ಲಿ ಸೋಲಿಸಿ ಜಯಶೀಲರಾದ ಬಗ್ಗೆ ಉಲ್ಲೇಖ ಉಂಟು. ಇವರು ತಮ್ಮ ಜೀವಿತ ಕಾಲದಲ್ಲಿ ಜಯತೀರ್ಥರನ್ನು ಭೇಟಿಯಾಗಿರಲೇಬೇಕು. ಮತ್ತು ಮತ ಪ್ರಸಾರ ಕಾರ್ಯದಲ್ಲಿ ಇಬ್ಬರೂ ಜತೆಯಾಗಿ ಸಹಕರಿಸಿರುವ ಸಂಭವವುಂಟು. ಇದರ ಸಂಕೇತವಾಗಿ ಎನ್ನುವಂತೆ ಮಳಖೇಡದಲ್ಲಿ ಇಬ್ಬರೂ ಜತೆಯಾಗಿಯೆ ವೃಂದಾವನದಲ್ಲಿ ಸನ್ನಿಹಿತರಾಗಿದ್ದಾರೆ.

– ಶ್ರೀಬನ್ನಂಜೆ ಗೋವಿಂದಾಚಾರ್ಯರು (ತಾಪಸ: ಪರಮಪೂಜ್ಯ ಶ್ರೀ ವಿದ್ಯಾಮಾನ್ಯತೀರ್ಥರ ಅಮೃತಮಹೋತ್ಸವದ ಅಭಿವಂದನ ಗ್ರಂಥ, ಪು. ೬, ಪ್ರ: ಶ್ರೀವಿದ್ಯಾಮಾನ್ಯತೀರ್ಥಶ್ರೀಪಾದರ ಪೀಠಾರೋಹಣ ಅಮೃತಮಹೋತ್ಸವ ಸಮಿತಿ, ಉಡುಪಿ., ೨೦೦೦)

೧. ಶ್ರೀಕಾಂತೇಶ್ವರಸದನೇऽನಯತ್ ಕಿಲೈಕೋ ಯಸ್ತ್ರಿಂಶನ್ನರವರನೀತಕೇತುಯಷ್ಟಿಮ್ ।
ಆಹತ್ಯಾ ಗುರುಗದಯೈವ ನಾಲಿಕೇರಾದ್ಯೋ ಲೇಭೇ ತರಲತರಾತ್ ಫಲಾನಿ ಕಾಮಮ್ ॥

– ಸುಮಧ್ವವಿಜಯ (೧೬/೨೬)

೨. ವಿನೇಯಜನಾನುಜಿಘೃಕ್ಷಯೇದಂ ಕಾವ್ಯಂ ಕೇನ ಕೃತಮ್? ಇತ್ಯಾಶಂಕಾಂ ಸ್ವಕೀರ್ತ್ಯನುವೃತ್ತಯೇ ಸ್ವನಾಮಧೇಯಖ್ಯಾಪನಪೂರ್ವಕಂ ಪರಿಹರತಿ – ॥ ಸಮಧಿಗತೇತಿ ॥ – ಸಮಧಿಗತಂ ಸಮ್ಯಜ್ಜ್ಞಾತಂ ಸಮಸ್ತನ್ಯಾಯಶಾಸ್ತ್ರಂ ಯೇನ ಸಃ । ಅತ್ರ ನ್ಯಾಯಶಾಸ್ತ್ರಶಬ್ದೇನ ಬ್ರಹ್ಮಮೀಮಾಂಸಾಶಾಸ್ತ್ರಮುಚ್ಯತೇ । ನ್ಯಾಯಶಬ್ದೋ ಹಿ ನೀಯತೇ ಜ್ಞಾಪ್ಯತೇ ವಿವಕ್ಷಿತಾರ್ಥೋऽನೇನೇತಿ ವ್ಯುತ್ಪತ್ತ್ಯಾ ಯುಕ್ತಿವಚನಃ । ಬ್ರಹ್ಮಮೀಮಾಂಸಾಶಾಸ್ತ್ರಂ ಚ ಶ್ರುತ್ಯರ್ಥನಿರ್ಣಾಯಕಯುಕ್ತಿಗ್ರಥನಾತ್ಮಕಾನುಮಾನವಾಕ್ಯತುಲ್ಯಮಿತಿ

**ಸಮಧಿಗತಸಮಸ್ತನ್ಯಾಯಶಾಸ್ತ್ರಃ ಸುವಾಗ್ಮೀ**
**ಕ್ಷಿತಿಸುರಗುರುವಿದ್ಯಾಮೂರ್ತಿತೀರ್ಥಾರ್ಯಶಿಷ್ಯಃ।**
**ರಘುಪತಿಪದಭಕ್ತೋ ರಾಜರಾಜೇಶ್ವರಾಖ್ಯಃ**
**ಸುಲಲಿತಪದಬಂಧಂ ಕಾವ್ಯಮೇತಚ್ಚಕಾರ॥ (೨/೬೯)**

ಇಂದು ತಿಳಿದುಬರುವಂತೆ, ಶ್ರೀರಾಜರಾಜೇಶ್ವರತೀರ್ಥರು ಶ್ರೀವಿದ್ಯಾಮೂರ್ತಿ-ತೀರ್ಥರ ಶಿಷ್ಯರು; ಶ್ರೀರಾಮದೇವರ ಪಾದಪದ್ಮಾರಾಧಕರು. ಸಮಸ್ತ ನ್ಯಾಯಶಾಸ್ತ್ರವನ್ನು ಸರ್ವಂಕಷವಾಗಿ ಅಧ್ಯಯನ ಮಾಡಿದ ವಿದ್ವಾಂಸರು. ಒಳ್ಳೆಯ ವಾಗ್ಮಿಗಳು.

ಶ್ರೀವಿಶ್ವಪತಿತೀರ್ಥರ ರಾಮಸಂದೇಶವ್ಯಾಖ್ಯಾನದ ಅವತಾರಿಕೆಯಲ್ಲಿನ ಮಾತುಗಳು ಸಹ ಇದನ್ನು ಸ್ಫುಟಪಡಿಸುವವು.

**ಶ್ರೀಮದ್ರಾಮಚಂದ್ರಪದಾರವಿಂದಾರಾಧನಾಸಾದಿತಕವಿತಾದ್ಯನೇಕ-ಗುಣಾಃ ಶ್ರೀಹರಿಚರಣಾರವಿಂದಮಕರಂದಭ್ರಮರಾಯಿತವಿದ್ಯಾಮೂರ್ತಿತೀರ್ಥಶ್ರೀಮಚ್ಚರಣಾನಾಮಂತೇವಾಸಿವರಾ ರಾಜರಾಜೇಶ್ವರಾಖ್ಯಯತಯಃ**

ಅವರು ರಚಿಸಿದ ಕೃತಿಗಳು ಎರಡು; ಒಂದು ಈ ಮಂಗಲಾಷ್ಟಕವಾದರೆ, ಮತ್ತೊಂದು [೧]ಶ್ರೀರಾಮಸಂದೇಶವೆಂಬ ಖಂಡಕಾವ್ಯ. ಪೂರ್ವಸಂದೇಶ, ಉತ್ತರ-

---

ಶಾಸ್ತ್ರೇ ಪ್ರತಿಪಾದಿತಮ್ । ಅತ ಏವ ನ್ಯಾಯಶಾಸ್ತ್ರಮಿತ್ಯನುಕ್ತ್ವಾ ಸಮಸ್ತನ್ಯಾಯಶಾಸ್ತ್ರಮಿತ್ಯುಕ್ತಮ್ । ಸಂಪೂರ್ಣನ್ಯಾಯಶಾಸ್ತ್ರತ್ವಂ ಹಿ ಸಕಲವೇದಾರ್ಥನಿರ್ಣಾಯಕಶ್ರೀಭಗವದವತಾರಭೂತವೇದವ್ಯಾಸ-ಕೃತಬ್ರಹ್ಮಮೀಮಾಂಸಾಶಾಸ್ತ್ರಸ್ಯೈವ ಯುಜ್ಯತೇ, ನ ಕುತರ್ಕಶಾಸ್ತ್ರಸ್ಯ । ತಸ್ಯ ಭಗವತ್ಯೈವ ನ್ಯಾಯಾಭಾಸತ್ವಪ್ರತಿಪಾದನಾದಿತಿ । ಯದ್ವಾ - ಸಮಧಿಗತಾನಿ ಸಮಸ್ತಶಾಸ್ತ್ರಾಣಿ ನ್ಯಾಯಶಾಸ್ತ್ರಂ ಚ ಯೇನ ಸ ಇತಿ । ಪ್ರಶಸ್ತಾ ವಾಚೋಽಸ್ಯ ಸಂತೀತಿ ವಾಗ್ಮೀ ಸಮ್ಯಗ್ವಾಗ್ಮೀ ಸುವಾಗ್ಮೀ ಏವಂರೂಪಕಾವ್ಯಾದಿಕರಣೇ ಸಮರ್ಥ ಇತ್ಯರ್ಥಃ।

- ಶ್ರೀವಿಶ್ವಪತಿತೀರ್ಥರು, (ರಾಮಸಂದೇಶವ್ಯಾಖ್ಯಾ)

೧. ಶ್ರೀವಿಶ್ವಪತಿತೀರ್ಥರು ತಮ್ಮ ವ್ಯಾಖ್ಯಾನದ ಪ್ರಾರಂಭದಲ್ಲಿ ರಾಮಸಂದೇಶಕ್ಕೆ ನೀಡಿರುವ ಅವತಾರಿಕೆಯಲ್ಲಿ ಅದರ ಹಿರಿಮೆ-ಗರಿಮೆಗಳನ್ನು ಉಲ್ಲೇಖಿಸಿರುವರು:

ಶ್ರೀಮದ್ರಾಮಚಂದ್ರಪದಾರವಿಂದಾರಾಧನಾಸಾದಿತಕವಿತಾದ್ಯನೇಕಗುಣಾಃ ಶ್ರೀಹರಿಚರಣಾರವಿಂದ-ಮಕರಂದಭ್ರಮರಾಯಿತವಿದ್ಯಾಮೂರ್ತಿತೀರ್ಥಶ್ರೀಮಚ್ಚರಣಾನಾಮಂತೇವಾಸಿವರಾ ರಾಜರಾಜೇಶ್ವ-ರಾಖ್ಯಯತಯೋ ಮೇಘಸಂದೇಶಾಖ್ಯಕಾವ್ಯಂ ಸರಸಮಪ್ಯಸ್ವಪ್ರೋತ್ತಮನಾಯಕಂ ನ ಖಲ್ವಾಪಾಮರ ಪಂಡಿತಜನಮನೋವಿನೋದಜನಕಮಿತಿ ಸ್ಫುಟಂ ತಾದೃಶರಸಸಂಪಾದಕಂ ಲೋಕೋತ್ತರ-ನಾಯಕರುಚಿರಂ ನಾಮಮಾತ್ರೇಣ ಕೀರ್ತನತೋಽಪ್ಯಶೇಷದೋಷಹರಂ ಪರಮೇಶ್ವರಾವಾಂತರೇ-ಶ್ವರಯೋಃ ಶ್ರೀರಾಮಹನುಮತೋರ್ವಿಶೇಷತಃ ಸಂವಾದಪ್ರತಿಪಾದಕಂ ಸಂಕ್ಷೇಪತಃ ಸಕಲರಾಮಾ-ಯಣಾರ್ಥಪ್ರತಿಪಾದನಪರಂ ಕಥಿತಸಕಲದೇಶಾಂಭೋಧಿಸಾರಸ್ವಭಾವಮಿತಿ ವಕ್ಷ್ಯಮಾಣಗುಣೋ-

ಸಂದೇಶ ಎಂಬ ಎರಡು ಭಾಗಗಳನ್ನು ಹೊಂದಿರುವ ಇದರಲ್ಲಿ ಕ್ರಮವಾಗಿ ೮೩ ಹಾಗೂ ೭೦ ಒಟ್ಟು ೧೫೩ ಶ್ಲೋಕಗಳು ಇವೆ. ಶ್ರೀರಾಮನ ಸಂದೇಶವನ್ನು ಸೀತಾಕೃತಿಗೂ, ಸೀತಾಕೃತಿಯ ಸಂದೇಶವನ್ನು ಶ್ರೀರಾಮನಿಗೂ ಹನುಮಂತ ತಲುಪಿಸಿದ ವಿವರ ಇದರ ವಸ್ತು. ಮೇಲ್ನೋಟಕ್ಕೆ ಇದು ಕಾಳಿದಾಸನ ಮೇಘಸಂದೇಶವನ್ನು ಜ್ಞಾಪಿಸುವ ಕೃತಿ. ಇಂತಹ ಸಂದೇಶಕೃತಿಗಳಲ್ಲಿ ಕಾಳಿದಾಸನ ಮೇಘಸಂದೇಶ ತುಂಬಾ ಪ್ರಸಿದ್ಧ. ಪ್ರಸ್ತುತ ರಾಮಸಂದೇಶ ಅನೇಕ ಕಡೆ ಮೇಘಸಂದೇಶವನ್ನು ಜ್ಞಾಪಿಸುವಂತಿದ್ದರೂ, ಅದರಲ್ಲಿ ಕಾಣದ ಅಧ್ಯಾತ್ಮಪ್ರಜ್ಞೆ ಇದರ ವೈಶಿಷ್ಟ್ಯ. ಕಾಳಿದಾಸನದು ಲೌಕಿಕ ಕಾವ್ಯ. ರಾಜರಾಜೇಶ್ವರರದು ಆಧ್ಯಾತ್ಮಿಕ ಕಾವ್ಯ. ಕಾಳಿದಾಸನದು ಸಂದೇಶ ವಾಹಕನ ಕಡೆಯ ದೃಷ್ಟಿಯಾದರೆ, ಶ್ರೀರಾಜರಾಜೇಶ್ವರರದು ಸಂದೇಶ ನೀಡಿದವನ ಮಹತಿಯನ್ನು ತಿಳಿಸುವ ದೃಷ್ಟಿ ಸರಸ ಶೈಲಿ ಇದರ ಹಿರಿಮೆ. ಮಂದಾಕ್ರಾಂತ ಇದರ ಛಂದಸ್ಸು. ಇದಕ್ಕೆ ಶ್ರೀಪೇಜಾವರಮಠದ ಅಪೂರ್ವ ಗ್ರಂಥಕಾರರಾದ ಶ್ರೀವಿಶ್ವಪತಿತೀರ್ಥರು[೧] 'ಪದಾರ್ಥಪ್ರಕಾಶ' ಎಂಬ ವ್ಯಾಖ್ಯಾನವನ್ನು ರಚಿಸಿರುವರು. ಅವರು ಆರಂಭವಲ್ಲಿ ಬರೆದಿರುವ ಮಾತುಗಳಲ್ಲಿ ಶ್ರೀರಾಜರಾಜೇಶ್ವರರ ಕಾವ್ಯಕೌಶಲದ ಬಣ್ಣನೆ ಬಂದಿದೆ:

**ಕ್ವ ರಾಜರಾಜೇಶ್ವರಕಾವ್ಯಕೌಶಲಂ ಕ್ವ ಚಾಸ್ಯ ಟೀಕಾರಚನೇ ಮಮೋದ್ಯಮಃ ।**
**ತಥಾಪಿ ತೇಷಾಂ ಕೃಪಯಾ ತು ಕೇವಲಂ ತದಿಷ್ಟತಯೇ ತತ್ರ ಯತೇ ಯಥಾಮತಿ ॥**

"ಶ್ರೀರಾಜರಾಜೇಶ್ವರರ ಕಾವ್ಯಕೌಶಲವೆಲ್ಲಿ? ಅದಕ್ಕೆ ಟೀಕಾ ರಚಿಸುವ ನನ್ನ ಪ್ರಯತ್ನವೆಲ್ಲಿ? ಹಾಗಿದ್ದರೂ ಕೇವಲ ಅವರ ಕೃಪೆಯಿಂದಲೇ ಅದನ್ನು ತಿಳಿಸಲು ಯಥಾಮತಿ ಪ್ರಯತ್ನಿಸುವೆ"

---

ಪೇತಂ ಚ ರಾಮಸಂದೇಶಾಖ್ಯಂ ಮಹಾಕಾವ್ಯಂ ಭಗವತ್ಪ್ರೀತ್ಯರ್ಥಂ ವಿದೇಹಜಾನುಗ್ರಹಾರ್ಥಂ ಚ ಚಿಕೀರ್ಷವಃ ಸ್ವಚಿಕೀರ್ಷಿತಸ್ಯ ಗ್ರಂಥಸ್ಯ ನಿರ್ವಿಘ್ನೇನ ಪರಿಸಮಾಪ್ತ್ಯಾದಿಪ್ರಯೋಜನಕಮವಿಗೀತಶಿಷ್ಟಾಚಾರಪರಂಪರಾಪ್ರಾಪ್ತಮ್ 'ಆಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾಽಪಿ ತನ್ಮುಖಮ್' ಇತಿ ವಚನಾತ್ ಸರ್ವೋತ್ತಮಪರಮಮಂಗಲಲಕ್ಷ್ಮೀನಾರಾಯಣಾಖ್ಯವಸ್ತುಕೀರ್ತನರೂಪಮಂಗಲಮಾಚರನ್ನೇವ ಚಿಕೀರ್ಷಿತಗ್ರಂಥಕರಣೋಪಯೋಗಿತ್ವೇನ ಸಂಕ್ಷೇಪತೋ ಬಾಲಕಾಂಡಾದಿಕಿಷ್ಕಿಂಧಾಕಾಂಡಾಂತಕಾಂಡಚತುಷ್ಟಯಪ್ರತಿಪಾದ್ಯಮರ್ಥಂ ದರ್ಶಯಿತುಂ ಕಾಂಡಚತುಷ್ಟಯೋಕ್ತಧರ್ಮವತ್ತಯಾ ಲಕ್ಷ್ಮೀಕಾಂತಂ ವಿಶಿನಷ್ಟಿ – ॥ ಲಕ್ಷ್ಮೀಕಾಂತ ಇತಿ ॥

೧. ವೈಷ್ಣವ ಕಾವ್ಯಪರಂಪರೆಯ ವ್ಯಾಖ್ಯಾನಕಾರರಲ್ಲಿ ಈ ಶ್ರೀವಿಶ್ವಪತಿತೀರ್ಥರದು ಅಗ್ರಮಾನ್ಯಸ್ಥಾನ ಶ್ರೀಮದಾಚಾರ್ಯರ ದ್ವಾದಶಸ್ತೋತ್ರ, ಅವರ ಸಾಕ್ಷಾಚ್ಛಿಷ್ಯ ಪರಂಪರೆಯವರು ರಚಿಸಿದ ಚತುರ್ದಶ ಸ್ತೋತ್ರಗಳು, ಶ್ರೀನಾರಾಯಣಪಂಡಿತಾಚಾರ್ಯರ ಸುಮಧ್ವವಿಜಯ, ಸಂಗ್ರಹರಾಮಾಯಣ ಮೊದಲಾದ ಅತ್ಯಂತ ಉಪಯುಕ್ತವಾದ ಕೃತಿಗಳಿಗೆಲ್ಲ ಅಪೂರ್ವ ಟೀಕೆಗಳನ್ನು ರಚಿಸಿದ ಹಿರಿಮೆ ಇವರದು.

ಸ್ವತಃ ರಾಜರಾಜೇಶ್ವರರ 'ರಾಮಸಂದೇಶ' ಕೃತಿಯ ಕೊನೆಯಲ್ಲಿ ಬಂದಿರುವ ಮಾತು ಅವರ ವಿದ್ವತ್ತಿನ ಬಗ್ಗೆ ಬೆಳಕು ಚೆಲ್ಲುತ್ತದೆ:

## ಶ್ರೀರಾಜರಾಜೇಶ್ವರತೀರ್ಥ–ಶ್ರೀರಾಜರಾಜೇಶ್ವರಯತಿ

ಶ್ರೀರಾಜರಾಜೇಶ್ವರರು, ರಾಜರಾಜೇಶ್ವರತೀರ್ಥರೋ? ರಾಜರಾಜೇಶ್ವರ–ಯತಿಯೋ? ಅವರು ಪೀಠವನ್ನಲಂಕರಿಸಲಿಲ್ಲವಾದ್ದರಿಂದ ರಾಜರಾಜೇಶ್ವರಯತಿ ಎಂಬುದಷ್ಟೇ ಎಂಬುದು ಕೆಲವರ ವಾದ. ಅದಕ್ಕೆ ಅವರು ಆಶ್ರಮ ಕೊಡುವಾಗ ಯತಿ ಎಂದು, ಪೀಠ ನೀಡುವಾಗ ತೀರ್ಥ ಎಂದೂ ಸೇರಿಸುತ್ತಿದ್ದರು ಎಂದು ಕಾರಣ ಕೊಡುವರು. ಆದರೆ ಈ ವಾದ ಸರಿಯಲ್ಲ ಎನ್ನಿಸುವುದು. ಶ್ರೀರಾಜರಾಜೇಶ್ವರತೀರ್ಥರು ಎಂಬುದಾಗಿ ಅವರ ಬಗ್ಗೆ ಕಾಂತಾವರದಲ್ಲಿ ಉಪಲಬ್ಧವಿರುವ [೧]ಶಿಲಾಶಾಸನದಲ್ಲಿ ಎರಡು ಬಾರಿ (ಏಳು ಹಾಗೂ ಹದಿನಾರನೇ ಸಾಲುಗಳು) ಬರೆಯಲಾಗಿದೆ[೨]. ಅದನ್ನು ಶಾಸ್ತ್ರೀಯ ಪ್ರಕ್ರಿಯೆ ತಿಳಿಯದ ರಾಜಕೀಯ ಮಂದಿ ಮಾಡಿದ ತಪ್ಪು ಎಂದು ಲಘುವಾಗಿ ಕಾಣುವಂತಿಲ್ಲ. ಲಿಪಿಕಾರರ ತಪ್ಪು ಪದಗಳನ್ನು ಬದಲಾಯಿಸುವದರಲ್ಲಲ್ಲ, ಅಕ್ಷರಸ್ಖಾಲಿತ್ಯದಲ್ಲಿ ಮಾತ್ರ. ಅಲ್ಲದೆ, ಬಿಡಿ ಸನ್ಯಾಸಿಗಳಿಗೆ ತೀರ್ಥ ಎಂದು ಸೇರಿಸಬೇಕಿಲ್ಲ ಎಂಬುದು ಅಷ್ಟಾಗಿ ಪ್ರಮಿತವಾದ ವಿಚಾರ ಎನ್ನಿಸಲಾರದು. ಅದಕ್ಕೆ ಶ್ರೀಜಯತೀರ್ಥರ ಬಿಡಿಸನ್ಯಾಸಿ ಶಿಷ್ಯರಾದ ಶ್ರೀವ್ಯಾಸತೀರ್ಥರು, ಶ್ರೀಸತ್ಯನಿಧಿತೀರ್ಥರ ಶಿಷ್ಯರಾಗಿದ್ದ ಶ್ರೀಸತ್ಯನಾಥತೀರ್ಥರ ಶ್ರೀರಂಗನಾಥತೀರ್ಥ ಎಂಬ ಮೊದಲ ಹೆಸರು, ಇತ್ತೀಚಿಗೆ ಬಿಡಿಸನ್ಯಾಸಿಗಳಾಗಿ ಸನ್ಯಾಸ ಸ್ವೀಕರಿಸಿದ ಅನೇಕರುಗಳಿಗೆ ತೀರ್ಥ ಎಂಬ ಹೆಸರು ಕಂಡುಬರುವುದು ನಿದರ್ಶನ. ಶ್ರೀಗೋವಿಂದ ಒಡೆಯರು, ಶ್ರೀಸಂಕರ್ಷಣ ಒಡೆಯರು ಮೊದಲಾಗಿ ಕೆಲವು ಬಿಡಿ ಸನ್ಯಾಸಿಗಳ ಹೆಸರು ಇರುವುದು ನಿಜ. ಈ ವಿರೋಧವನ್ನು ಹೀಗೆ ಪರಿಹರಿಸಬಹುದು. ಉತ್ತರಾಧಿಕಾರಿ ಎಂಬ ದೃಷ್ಟಿಯಿಂದಲೇ ಆಶ್ರಮ ನೀಡಿದಾಗ ತೀರ್ಥ ಎಂದೂ, ಕೇವಲ ಬಿಡಿ ಸನ್ಯಾಸಿ ಎಂಬ ದೃಷ್ಟಿ ಇದ್ದಾಗ ಯತಿ ಎಂದೂ ನೀಡುವರು ಎಂದು ತಿಳಿಯುವುದು ಸೂಕ್ತ ಎನ್ನಿಸುವುದು. ಶ್ರೀರಾಜರಾಜೇಶ್ವರತೀರ್ಥರಿಗೆ ಉತ್ತರಾಧಿಕಾರಿ ಎಂಬ ಹಿನ್ನೆಲೆಯಲ್ಲಿಯೇ ಶ್ರೀವಿದ್ಯಾಮೂರ್ತಿತೀರ್ಥರು ಸನ್ಯಾಸದೀಕ್ಷೆ ನೀಡಿದ್ದರು ಎಂದು ತಿಳಿಯಲು

---

೧. ಇದು ಇಮ್ಮಡಿ ದೇವರಾಯ ಎಂಬ ವಿಜಯನಗರದ ರಾಜ ಶ್ರೀರಾಜರಾಜೇಶ್ವರರಿಗೆ ಅಪಾರವಾದ ಭೂಮಿ ಕಾಣಿಗಳನ್ನು ನೀಡಿದ ವಿವರಗಳನ್ನು ಒದಗಿಸುವ ಶಾಸನ. ಪಲಿಮಾರುಮಠದ ಕಾಂತಾವರದ ಬಡಗಣಮಠದಲ್ಲಿ ಗರ್ಭಗುಡಿಯ ಅಂಗಳದಲ್ಲಿ ಸ್ಥಾಪಿತವಾಗಿರುವ ಶಾಸನ: ಕಾಲ ಕ್ರಿ.ಶ. ೧೪೩೩, ಜೂನ್ ೨೮, ಭಾನುವಾರಕ್ಕೆ ಸರಿಹೊಂದುವ ಶಕೆ ೧೩೫೫, ಪ್ರಮಾದಿ, ಆಷಾಢ ಶುಕ್ಲ ಏಕಾದಶೀ. ಒಟ್ಟು ೨೨ ಸಾಲುಗಳ ಶಾಸನ; ಭಾಷೆ ಕನ್ನಡ (South Indian inscriptions Vol - 7, Pg-116)

೨. ಒಬ್ಬ ಬಿಡಿಸನ್ಯಾಸಿಗಳಿಗೆ ಅಷ್ಟು ಅಪಾರ ಪ್ರಮಾಣದ ದಾನಕೊಡುವುದಾಗಲಿ, ಅದನ್ನು ಅವರು ತೆಗೆದುಕೊಳ್ಳುವುದಾಗಲಿ ಅಸಂಭಾವಿತ.

ಶಿಲಾಶಾಸನದಲ್ಲಿನ ತೀರ್ಥ ಎಂಬ ಪದ ಗಮಕವಾಗುವುದು. ಅಲ್ಲದೆ ಶಾಸನದಲ್ಲಿ ಬಡಗಣಮಠದ ರಾಜರಾಜೇಶ್ವರತೀರ್ಥಶ್ರೀಪಾದಂಗಳವರು ಎಂಬ ಉಲ್ಲೇಖ ಇರುವುದರಿಂದ ಅವರು ಮಠದ ಚಿಕ್ಕಪಟ್ಟದವರಾಗಿದ್ದರು ಎಂದು ತಿಳಿಯುವುದು[೧]. ಅಲ್ಲದೇ ಸ್ವತಃ ಶ್ರೀರಾಜರಾಜೇಶ್ವರತೀರ್ಥರು ತಮ್ಮ ರಾಮಸಂದೇಶ ಕೃತಿಯಲ್ಲಿ ತಿಳಿಸಿರುವಂತೆ ಅವರು '**ರಘುಪತಿಪದಭಕ್ತಃ**' ಆಗಿದ್ದರು. ಇಲ್ಲಿ ರಘುಪತಿ ಎಂದರೆ ಶ್ರೀಪಲಿಮಾರುಮಠದ ಪಟ್ಟದ ದೇವರಾದ ಶ್ರೀರಾಮದೇವರು; ಶ್ರೀವಿಶ್ವಪತಿತೀರ್ಥರು ಸಹ '**ಶ್ರೀಮದ್ರಾಮಚಂದ್ರಪಾದಾರವಿಂದಾರಾಧನಾಸಾದಿತಕವಿತಾದ್ಯನೇಕಗುಣಾಃ**' (ಶ್ರೀರಾಮಚಂದ್ರದೇವರ ಪಾದಾರವಿಂದಗಳ ಆರಾಧನೆಯಿಂದ ಕವಿತಾದಿ ಅನೇಕ ಗುಣಗಳನ್ನು ಸಮಪಾದಿಸಿಕೊಂಡವರು - ಎಂದರ್ಥ)ಎಂದು ಸ್ಪಷ್ಟವಾಗಿ ತಿಳಿಸಿದ್ದು ಅವರು ಶ್ರೀಪಲಿಮಾರುಮಠದ ಪಟ್ಟದ ದೇವರಾದ ಶ್ರೀರಾಮದೇವರನ್ನು ಪೂಜಿಸಿದ ವಿಷಯ ಸ್ಪಷ್ಟಪಡುವುದು. ಇದೆಲ್ಲ ಬಿಡಿಸನ್ಯಾಸಿಗಳಿಗೆ ದೊರೆಯುವ ವಿಷಯವಲ್ಲ. ಶ್ರೀವಿಶ್ವಪತಿತೀರ್ಥರು ಇವರ ಕೃಪೆಯಿಂದ ವ್ಯಾಖ್ಯಾನ ರಚಿಸಿರುವೆ ಎಂದಿರುವುದು ಸಹ ಇವರ ಉನ್ನತ ಸ್ಥಾನಕ್ಕೆ ನಿದರ್ಶನ. ಆದ್ದರಿಂದ ಅವರನ್ನು ಶ್ರೀರಾಜರಾಜೇಶ್ವರತೀರ್ಥರು[೨] ಎಂದು ತೀರ್ಥ ನಾಮದಿಂದಲೇ ವ್ಯವಹರಿಸುವುದರಲ್ಲಿ ಯಾವ ಅನೌಚಿತ್ಯವು ಸಹ ಕಂಡು ಬರುವುದಿಲ್ಲ.

## ಮಂಗಲಾಷ್ಟಕದ ವೈಶಿಷ್ಟ್ಯ

ಮಂಗಲಾಷ್ಟಕವನ್ನು ವಿವಾಹಕಾಲದಲ್ಲಿ ಪಠಿಸುವ ಸಂಪ್ರದಾಯಕ್ಕೆ ಭವಿಷ್ಯೋತ್ತರಪುರಾಣದ ವೇಂಕಟೇಶಮಾಹಾತ್ಮ್ಯ ಉತ್ತಮ ಪುರಾವೆಯಾಗಿದೆ. ಅದರಲ್ಲಿ ಸ್ಪಷ್ಟವಾಗಿ 'ಸುಮುಹೂರ್ತೇ ತದಾ ಪ್ರಾಪ್ತೇ **ಮಂಗಲಾಷ್ಟಕ**ಮಬ್ರವೀತ್[೩]' ಎಂಬ ಉಲ್ಲೇಖ ಕಂಡುಬರುವುದು. ಇದನ್ನು ಗಮನದಲ್ಲಿಟ್ಟುಕೊಂಡೇ ಈ ಅಷ್ಟಕದಲ್ಲಿ

---

೧. ಪ್ರಸಕ್ತ ಶ್ರೀಪೇಜಾವರಮಠದ ಕಿರಿಯಪಟ್ಟದ ಶ್ರೀವಿಶ್ವಪ್ರಸನ್ನತೀರ್ಥಶ್ರೀಪಾದರಂತೆ, ಶ್ರೀಅದಮಾರು-ಮಠದ ಕಿರಿಯ ಪಟ್ಟದ ಶ್ರೀಈಶಪ್ರಿಯತೀರ್ಥಶ್ರೀಪಾದರಂತೆ ಎಂದು ತಿಳಿಯಬಹುದು.

೨. ಉಡುಪಿಯ ಶ್ರೀಕೃಷ್ಣಾಪುರಮಠದಲ್ಲಿ ಉಪಲಬ್ಧವಿರುವ ವ್ಯಾಖ್ಯಾನ ಸಮೇತವಾದ ಶ್ರೀರಾಮಸಂದೇಶಕೃತಿ ಪ್ರಕಾಶಿತವಾಗಿದ್ದು(೧೯೧೭), ಮೂಲಕೃತಿಗೆ 'ಶ್ರೀಮದ್ರಾಜರಾಜೇಶ್ವರಭಿಕ್ಷುವರವಿರಚಿತ' ಎಂದು, ಅದರ ಶ್ರೀವಿಶ್ವಪತಿತೀರ್ಥಕೃತ ವ್ಯಾಖ್ಯಾನದಲ್ಲಿ 'ಶ್ರೀರಾಜರಾಜೇಶ್ವರತೀರ್ಥಶ್ರೀಮಚ್ಚರಣವಿರಚಿತ' ಎಂದು ಉಲ್ಲೇಖವಿರುವುದು ಇದನ್ನು ಸ್ಫುಟಪಡಿಸುವುದು. ಅದರ ಪ್ರಸ್ತಾವನೆಯಲ್ಲೂ ಶ್ರೀರಾಜರಾಜೇಶ್ವರತೀರ್ಥ ಎಂಬ ಉಲ್ಲೇಖವೇ ಇದೆ. ಶ್ರೀರಾಜರಾಜೇಶ್ವರತೀರ್ಥರ ಮಂಗಲಾಷ್ಟಕವನ್ನು ಈ ಮುನ್ನ ಅನೇಕ ಬಾರಿ ಪ್ರಕಾಶನಪಡಿಸಿದ ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ, ಉಡುಪಿಯ 'ಸ್ತೋತ್ರಮಂಜರೀ' ಮೊದಲಾದ-ವುಗಳಲ್ಲೂ ಶ್ರೀರಾಜರಾಜೇಶ್ವತೀರ್ಥ ಎಂಬ ಉಲ್ಲೇಖವೇ ಇರುವುದು ಸಹ ಗಮನಾರ್ಹ.

೩. ವೇಂಕಟೇಶಮಾಹಾತ್ಮ್ಯ - ಭವಿಷ್ಯೋತ್ತರಪುರಾಣ (೧೧/೩೩೮)

'ಮಾಂಗಲ್ಯಾದಿಶುಭಕ್ರಿಯಾಸು' ಎಂದು ಹೇಳಿರುವುದು ತುಂಬಾ ಅರ್ಥವತ್ತಾದ ಮಾತು.

ವಿವಾಹಕಾಲದಲ್ಲಿ ಮಂಗಲಾಷ್ಟಕ ಪಠಿಸುವ ಪದ್ಧತಿ ವೈಷ್ಣವೇತರರಲ್ಲೂ ಕಂಡುಬರುವುದು. ಆದರೆ, ವೈಷ್ಣವ ವಿವಾಹ ಮಹೋತ್ಸವಗಳಲ್ಲಿ ಶ್ರೀರಾಜರಾಜೇಶ್ವರ-ತೀರ್ಥರ ಮಂಗಲಾಷ್ಟಕದ ಪಠನೆ ನಿಯಮೇನ ಕಂಡುಬರುತ್ತಿರುವುದು ಗಮನಿಸಬೇಕಾದ ಸಂಗತಿ. ಮತಭೇದ, ಸಂಪ್ರದಾಯಭೇದ ಮೊದಲಾದ ಯಾವ ಕಾರಣಕ್ಕೂ ಇದರ ಪಠನೆ ತಪ್ಪುವುದಿಲ್ಲ ಎಂಬಲ್ಲಿ ಈ ಕೃತಿಯ ವಿಶೇಷವಾದ ಹಿರಿಮೆ ಎದ್ದು ಕಾಣುವುದು.

ಮಂಗಲಾಷ್ಟಕದ ಮೊದಲ ಶ್ಲೋಕ ಶ್ರೀಹರಿಯ ಸರ್ವೋತ್ತಮತ್ವವನ್ನು ಲಕ್ಷ್ಮೀಪತಿತ್ವ, ಬ್ರಹ್ಮಪಿತೃತ್ವ, ಗರುಡವಾಹನತ್ವ, ಶೇಷಶಯನತ್ವ, ಸುರಪರಿವಾರತ್ವ ಮೊದಲಾದ ಅನೇಕ ಕಾರಣಗಳನ್ನು ನೀಡಿ ಸಮರ್ಥಿಸುವುದು. ಎರಡನೆಯ ಶ್ಲೋಕದಲ್ಲಿ ಬ್ರಹ್ಮಾದಿ ಮೊದಲಾದ ಸಕಲಸುರಶ್ರೇಷ್ಠರು ಸಹ ಸಪತ್ನೀಕರಾಗಿ ಮಂಗಲವನ್ನೀಯಲಿ ಎಂಬುದಾಗಿ ದೇವತಾ ಸ್ತುತಿ ಬಂದಿದೆ. ಮೂರನೆಯ ಶ್ಲೋಕವು ವಿಶ್ವಾಮಿತ್ರಾದಿ ಋಷಿಗಳೆಲ್ಲ ಶ್ರೀಹರಿಯ ಪಾದಕಮಲದ ಚಿಂತನೆಯಲ್ಲಿ ತೊಡಗಿದ ಮಹನೀಯರು ಎಂದು ಅವರ ಹಿರಿಮೆಯ ಮುಖ್ಯ ಕಾರಣವನ್ನು ತಿಳಿಸುತ್ತಾ, ಅವರಿಂದ ಮಂಗಲ ಲಭಿಸಲಿ ಎಂಬ ಪ್ರಾರ್ಥನೆ ಬಂದಿದೆ. ನಾಲ್ಕನೆಯ ಶ್ಲೋಕವು ಮಾಂಧಾತೃ ಮೊದಲಾದ ಪುರಾಣಪ್ರಸಿದ್ಧ ರಾಜರನ್ನು ಕೊಂಡಾಡುತ್ತಾ, ಅವರೆಲ್ಲ ಮಂಗಲವನ್ನೀಯಲಿ ಎಂಬ ಪ್ರಾರ್ಥನೆಯಿದೆ. ಐದನೆಯ ಶ್ಲೋಕವು ಶ್ರೀಮೇರು, ಹಿಮಾಲಯ ಮೊದಲಾದ ಭರತಖಂಡದ ಪರ್ವತಗಳು ಮಂಗಲವನ್ನೀಯಲಿ ಎಂಬ ಬೇಡಿಕೆಯಿದೆ. ಭೂಮಿಯನ್ನು ಹೊತ್ತ ಅವುಗಳು ನಮ್ಮನ್ನು ಹರಸಲಿ ಎಂಬ ಇಲ್ಲಿಯ ಭಾವ ತುಂಬಾ ಸೊಗಸಾದದ್ದು. ಆರನೆಯ ಶ್ಲೋಕವು ಗಂಗಾ, ಸಿಂಧು ಮೊದಲಾದ ನದಿಗಳು ಶ್ರೀಹರಿಯ ಪಾದಕಮಲದಿಂದ ಉದಿಸಿದ ಹಿರಿಮೆಯನ್ನು ಹೊಂದಿರುವದರಿಂದ ಅವು ಮಂಗಲವನ್ನೀಯಲಿ ಎಂಬ ಪ್ರಾರ್ಥನೆಯಿದೆ. ಏಳನೆಯ ಶ್ಲೋಕ ಶಾಸ್ತ್ರಪ್ರಪಂಚದ ಅಗಾಧತೆಯನ್ನು ತೋರಿಸುವ ಅಪೂರ್ವ ಶ್ಲೋಕ. ಒಂದೆಡೆಯಲ್ಲಿ ಶಾಸ್ತ್ರದ ಪ್ರಭೇದಗಳನ್ನೆಲ್ಲ ಉಲ್ಲೇಖಿಸುವ ಇಂತಹ ಮತ್ತೊಂದು ಶ್ಲೋಕ ದೊರೆಯದು. ಸಕಲಶಬ್ದಗಳು ಸಹ ಶ್ರೀವಿಷ್ಣುವಿನ ಗುಣರಾಶಿಯನ್ನು ಹಾಡಿಹೊಗಳುವವು ಎಂಬ ಇಲ್ಲಿಯ ವಿವರ ಮಧ್ವಸಿದ್ಧಾಂತದ ಸಾರಸರ್ವಸ್ವವೇ ಆಗಿದೆ. ಪರಮಮಂಗಲನಾದ ಭಗವಂತನನ್ನು ಕೊಂಡಾಡುವ ಅಂತಹ ಶಾಸ್ತ್ರಗಳು ನಮಗೆ ಮಂಗಲವನ್ನೀಯಲಿ ಎಂಬ ಇಲ್ಲಿಯ ಪ್ರಾರ್ಥನೆ ತುಂಬಾ ರೋಚಕವಾದುದು. ಆದಿತ್ಯಾದಿ ಗ್ರಹಗಳು,

ಮೇಷಾದಿ ರಾಶಿಗಳು ಮೊದಲಾಗಿ ಸಕಲವೂ ಶುಭಕರ ಎಂಬುದು ಇಲ್ಲಿಯ ಒಂದು ಭಾವವಾದರೆ, ಮತ್ತೊಂದು ಮುಹೂರ್ತಗಳು ಶುಭಕರವಾಗಿರಬೇಕು ಎಂಬುದು ಮತ್ತೊಂದು ಭಾವ. ಒಟ್ಟಾಗಿ ಗ್ರಹಗಳನ್ನೊಳಗೊಂಡಂತೆ ಸಕಲ ಸ್ಥಾವರಜಂಗಮಾತ್ಮಕವಾದ ಜಗತ್ತು ಭಗವದ್ಭಕ್ತರಿಗೆ ಮಂಗಲಕರವೇ ಆಗಿದೆ ಎಂಬ ವಿಶೇಷ ಪ್ರಮೇಯವನ್ನು ಈ ಶ್ಲೋಕ ತಿಳಿಸುವುದು. ಕೊನೆಯದು ಫಲಶ್ರುತಿ; ಅದನ್ನು ಬರೆದವರು ಅದರ ಫಲ ಮತ್ತು ಪಠಿಸುವ ಸಂದರ್ಭಗಳ ಉಲ್ಲೇಖ; ಇವುಗಳನ್ನೊಳಗೊಂಡ ಈ ಶ್ಲೋಕ ಒಟ್ಟಾಗಿ ಮಂಗಲಾಷ್ಟಕದ ಹಿರಿಮೆಯನ್ನು **'ಜಗತಾಮಭೀಷ್ಟಫಲದಂ'** ಹಾಗೂ **'ಸರ್ವಾ-ಶುಭಧ್ವಂಸನಂ'** ಎಂದು ತಿಳಿಸಿವೆ[೧].

ಶ್ರೀಹರಿ, ದೇವತೆಗಳು, ಋಷಿಗಳು, ರಾಜರು, ಪರ್ವತಗಳು, ನದಿಗಳು, ಶಾಸ್ತ್ರಕೃತಿಗಳು ಹಾಗೂ ಗ್ರಹ ಮೊದಲಾದವುಗಳ ಸ್ಮರಣೆ ಸಕಲ ಅರಿಷ್ಟ ನಿವಾರಕ ಹಾಗೂ ಸರ್ವೇಷ್ಟದಾಯಕ ಎಂಬ ಇಲ್ಲಿಯ ಮಾತಿಗೆ ಶ್ರೀಮನ್ಮಹಾಭಾರತಾದಿ ಗ್ರಂಥಗಳು ಆಧಾರವಾಗಿವೆ. ಮಹಾಭಾರತದಲ್ಲಿ ಈ ವಿವರ ತುಂಬಾ ವಿಸ್ತಾರವಾಗಿಯೇ ಬಂದಿದೆ. ಪಠನೆಯ ಕಾಲ ಹಾಗೂ ಅದರ ಫಲಶ್ರುತಿಯನ್ನೂ ಸಹ ಮಹಾಭಾರತವೇ ಸಾರಿದೆ. ಇದರಿಂದ ಶ್ರೀರಾಜರಾಜೇಶ್ವರರ ಈ ಕೃತಿ ಸಾಧನೆಗೆ ಪರಮೋಪಕಾರಕ ಎಂಬ ವಿಶೇಷಾಂಶ ತಿಳಿಯುವುದು. ಮಹಾಭಾರತದ ಸಂದೇಶವನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಳ್ಳಲು ಅನುವಾಗುವಂತೆ ಒಂದು ಅಷ್ಟಕದಲ್ಲಿ ಅಳವಡಿಸಿರುವ ಅವರ ಪ್ರತಿಭೆ, ಪರಿಜ್ಞಾನ, ಕಾರುಣ್ಯ ಮೊದಲಾದವುಗಳು ನಿಜಕ್ಕೂ ಅನನ್ಯ. ಒಂದೇ ಒಂದು ಪುಟ್ಟ [೨]ಕೃತಿಯಿಂದ ಇಡೀ ಪರಂಪರೆಯ ಮಾನ್ಯತೆ ಗಳಿಸಿದ ಅನುಪಮವಾದ ಹಿರಿಮೆ ಶ್ರೀರಾಜರಾಜೇಶ್ವರತೀರ್ಥರದು. ಪ್ರಾಯಃ ಅನಂತರದ ಸಕಲ ವೈಷ್ಣವ ಮಂಗಲಾಷ್ಟಕಗಳಿಗೂ ನಾಂದಿ ಹಾಡಿದ ಕೃತಿ ಎಂಬುದು ಇದರ ಇನ್ನೊಂದು ವಿಶೇಷ. ಆ ಮುನ್ನ ರಚಿತವಾದ ಯಾವ ಮಂಗಲಾಷ್ಟಕವೂ ವೈಷ್ಣವ ಪರಂಪರೆಯಲ್ಲಿ ಕಂಡುಬಂದಿಲ್ಲ ಎಂಬುದು ಇವಕ್ಕೆ ಕಾರಣ. ಅನಂತರ ಬಂದ ಮಂಗಲಾಷ್ಟಕಗಳು ಇದರ ಪಡಿಯಚ್ಚಿನಂತೆಯೇ ಸಾಗಿವೆ ಎಂಬುದು ಇದರಲ್ಲಿ ಬಳಕೆಯಾಗಿರುವ ಶಾರ್ದೂಲವಿಕ್ರೀಡಿತ ವೃತ್ತವೂ ಒಂದು ಕಾರಣ. ಭಗವಂತನ ವಿವಿಧ ಅವತಾರಗಳ ಮೇಲೆ, ಗುರುಗಳ ಮೇಲೆ ರಚಿತವಾದ ಹತ್ತಾರು ಮಂಗಲಾಷ್ಟಕಗಳು ಇಂದು

---

೧. ಮಹಾಭಾರತದ ವಾಕ್ಯಗಳನ್ನು ಆಯಾ ಶ್ಲೋಕಗಳ ಅಡಿಟಿಪ್ಪಣಿಗಳಲ್ಲಿ ಉಲ್ಲೇಖಿಸಲಾಗಿದೆ.

೨. ಈ ಕೃತಿಯ ಪ್ರಭಾವವನ್ನು ಶ್ರೀವಾದಿರಾಜಸ್ವಾಮಿಗಳ ರುಗ್ಮಿಣೀಶವಿಜಯದಲ್ಲಿ ಗುರುತಿಸಲು ಸಾಧ್ಯವಿದೆ. ಶ್ರೀಕನಕದಾಸರ 'ಹರಿಭಕ್ತಿಸಾರ'ದ 'ಸಿರಿಯು ಕುಲಸತಿ ಸುತನು ಕಮಲಜ' ಎಂಬ ಪದ್ಯ(೨೫)ವಂತೂ ಈ ಮಂಗಲಾಷ್ಟಕದ 'ಲಕ್ಷ್ಮೀರ್ಯಸ್ಯ' ಎಂಬ ಶ್ಲೋಕದ ಅನುವಾದವೇ ಆಗಿದೆ.

ಉಪಲಬ್ಧವಿದ್ದು ಅವುಗಳಲ್ಲೆಲ್ಲ ಇದರ ಪ್ರಭಾವ ಮೇಲ್ನೋಟಕ್ಕೆ ಕಂಡುಬರುವಂತಹುದು. ಒಂದು ಅಪೂರ್ವ ಪ್ರಾತಃಸ್ತೋತ್ರವಾಗಿಯೂ ಸಹ ಈ ಮಂಗಲಾಷ್ಟಕ ಮಾನ್ಯವಾಗಿದೆ. **'ಸಂಧ್ಯಾಸು'** ಎಂಬ ಇದರಲ್ಲಿಯ ಪದ ಇದನ್ನು ಸೂಚಿಸುವುದು.

ಶ್ರೀಹರಿಸರ್ವೋತ್ತಮತ್ವದ ಪ್ರತಿಪಾದನೆ, ದೇವತಾತಾರತಮ್ಯ, ಋಷಿಮುನಿಗಳ ಚಿಂತನೆ, ರಾಜರ ಪ್ರಾರ್ಥನೆ, ಬೆಟ್ಟ-ನದಿಗಳ ಸ್ತೋತ್ರ, ಶಾಸ್ತ್ರಗಳ ಅನುಸಂಧಾನ, ಗ್ರಹಾದಿಗಳ ಪಾತ್ರ ಇವುಗಳನ್ನು ವಿವೇಚಿಸುವ ಮಹತ್ತರವಾದ ಕಾರ್ಯವೂ ಸಹ ಇದರಲ್ಲಿ ನಡೆದಿದೆ. ದೇವತೆಗಳು ಸ್ವತಂತ್ರರಲ್ಲ, ಜಡಗಳಿಗೆ ಕರ್ತೃತ್ವವಿಲ್ಲ ಎಂಬ ಅಂಶವನ್ನು ದೇವತೆಗಳು ಭಗವಂತನ ಪರಿವಾರ, ಜಡಗಳಿಗೆ ಅಧಿಪತಿಗಳಿರುವರು ಎಂಬ ಮಾತಿನ ಮೂಲಕ ಇದು ಮಧ್ವಸಿದ್ಧಾಂತದ ಆ ಚಿಂತನೆಯನ್ನು ಸಹ ಸಾದರಪಡಿಸಿದೆ. ಪ್ರತಿ ಹಂತದಲ್ಲೂ ಭಗವತ್ಕೇಂದ್ರಿತವಾಗಿ ವಿಚಾರಗಳನ್ನು ಮಂಡಿಸುವ ಮೂಲಕ, ಪ್ರತಿಬಿಂಬರಾದ ಜೀವರ ಉದ್ಧಾರ ಭಗವದನುಗ್ರಹದಿಂದಲೇ ಎಂಬ ಮಹಾಪ್ರಮೇಯವನ್ನು ಇದು ತಿಳಿಸುವುದು.

**'ಯಸ್ಯ ದೇವೇ ಪರಾ ಭಕ್ತಿಃ'** ಎಂಬ ಶ್ವೇತಾಶ್ವತರೋಪನಿಷತ್ತಿನ ಮಾತಿನಲ್ಲಿ ದೇವತೆಗಳಲ್ಲೂ, ಗುರುಗಳಲ್ಲೂ ಸಹ ತಾರತಮ್ಯ ಪೂರ್ವಕವಾದ ಭಕ್ತಿ ಕರ್ತವ್ಯ ಎಂಬ ಸಂದೇಶ ಬಂದಿರುವುದನ್ನು 'ದೇವೇ ಗುರೌ' ಎಂಬ ಪದಗಳಿಂದ ರಾಜರು, ತೀರ್ಥಗಳು ಮೊದಲಾಗಿ ಸಕಲವೂ ವಿವಕ್ಷಿತ ಎಂಬ ಮಾತಿನಲ್ಲಿ ಇದರ ನಿರೂಪಣೆ ಬಂದಿದೆ. ಹೀಗೆ ಒಂದು ಕಿರುಕೃತಿ ತುಂಬಾ ಹರಿದಾದ ಸಾಧನೆಗೆ ನೀಡಿರುವ ಸ್ಫೂರ್ತಿ ಬಣ್ಣನೆಗೆ ಮೀರಿದ್ದು.

ಇದರಲ್ಲಿಯ ಶ್ಲೋಕಗಳನ್ನು ತೀರ್ಥಸ್ನಾನ, ಪರ್ವತಾದಿಗಳ ದರ್ಶನ, ಋಷಿ-ಮುನಿಗಳ ಸ್ಮರಣೆ, ಗ್ರಂಥಗಳ ಅಧ್ಯಯನ, ಗ್ರಹಶಾಂತಿ ಮೊದಲಾದ ವಿಶೇಷ ಪ್ರಸಂಗಗಳಲ್ಲಿ ಪ್ರತ್ಯೇಕವಾಗಿಯೂ ಸಹ ಪಠಿಸಬಹುದು.

ದೈವಭಕ್ತಿ ಹಿನ್ನೆಲೆಯಲ್ಲಿ ಮಾತ್ರವಲ್ಲದೇ ಕೇವಲ ಭರತಖಂಡದ ಭೌಗೋಲಿಕ ಹಿರಿಮೆ ಗರಿಮೆಗಳನ್ನು ಅರಿಯಲು ಸಹ ಇದು ತುಂಬಾ ಉಪಯುಕ್ತವೆನ್ನಿಸುವ ಕೃತಿ. ಜಗತ್ತಿನ ಬೇರಾವ ದೇಶಕ್ಕೂ ಇಲ್ಲದ ಪೌರಾಣಿಕ, ಐತಿಹಾಸಿಕ, ಭೌಗೋಲಿಕ ಹಾಗೂ ಆಧ್ಯಾತ್ಮಿಕವಾದ ಮಹತ್ತ್ವ ನಮ್ಮ ದೇಶಕ್ಕಿದೆ ಎಂಬ ಅರಿವು ಇಂದಿನವರಿಗೆ ಮೂಡಲು ಇದು ನೀಡುವ ನೆರವು ಅಪಾರ.

ಈ **ಮಂಗಲಾಷ್ಟಕ** ಕೃತಿಯ ಅನೇಕ ಲಿಖಿತ ಪ್ರತಿಗಳು ಸಹ ದೊರೆಯುವುದು ಇದರ ಜನಪ್ರಿಯತೆಗೆ ಮತ್ತೊಂದು ನಿದರ್ಶನ. ನನ್ನ ಸಂಗ್ರಹ (ಶ್ರೀಜಯತೀರ್ಥಸಂಸ್ಕೃತ ಹಸ್ತಲಿಖಿತ ಗ್ರಂಥಾಲಯ, ವ್ಯಾಸನಕೆರೆ) ಒಂದರಲ್ಲೇ ಇದರ ಅನೇಕ ಪ್ರತಿಗಳು

ಉಪಲಬ್ಧವಿವೆ. ಅವುಗಳ ಹಿನ್ನೆಲೆಯಲ್ಲಿ ಇದನ್ನು ಸಂಪಾದಿಸಲಾಗಿದ್ದು, ಮೊದಲಿಗೆ ಸಂಸ್ಕೃತಾನಭಿಜ್ಞರ ಅನುಕೂಲಕ್ಕಾಗಿ ಮೂಲದೊಂದಿಗೆ ಅನುವಾದವನ್ನೂ ಕೊಡಲಾಗಿದೆ. ಆ ಬಳಿಕ ಇದರ ಅರ್ಥವೈಭವದ ಅರಿವಿಗೆ ನೆರವಾಗಲೆಂದು ಅನುವಾದದೊಂದಿಗೆ ವಿವರಣೆಗಳನ್ನು ಸಹ ನೀಡಲಾಗಿದೆ. ಅಡಿಟಿಪ್ಪಣಿಗಳಲ್ಲಿ ಇದರ ಅಧಿಕೃತತೆಯನ್ನು ಮನವರಿಕೆ ಮಾಡಿಕೊಡುವ ಅನೇಕ ಪ್ರಮಾಣವಚನಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಪರಿಶಿಷ್ಟ -೧ ರಲ್ಲಿ ಈ ಕೃತಿಗೆ ಮುಖ್ಯ ಆಕರವೆನ್ನಿಸಿದ ಮಹಾಭಾರತದ ಅನುಶಾಸನ ಪರ್ವದ ಎರಡು ಅಧ್ಯಾಯಗಳನ್ನು ಸಮಗ್ರವಾಗಿ ಕೊಡಲಾಗಿದೆ. ಅದರಂತೆ ಗರುಡಪುರಾಣ, ವಾಮನಪುರಾಣದ ಶ್ಲೋಕಗಳನ್ನು ಅದೇ ಪರಿಶಿಷ್ಟದಲ್ಲಿ ಕೊಡಲಾಗಿದೆ. ಈ ಮಂಗಲಾಷ್ಟಕದ ಪ್ರೇರಣೆಯಿಂದೆಂಬಂತೆ ಆ ಬಳಿಕ ಅನೇಕ ಮಂಗಲಾಷ್ಟಕಗಳು ಶ್ರೀರಾಮ, ನರಸಿಂಹ ಮೊದಲಾದ ಭಗವದವತಾರಗಳನ್ನು ಕುರಿತು ಹಾಗೂ ಗುರುಗಳನ್ನು ಕುರಿತು ರಚಿತವಾಗಿವೆ. ಅವೆಲ್ಲವುಗಳನ್ನು ಸಹ ಪರಿಶಿಷ್ಟ-೨ರಲ್ಲಿ ಕೊಡಲಾಗಿದೆ. ಪರಿಶಿಷ್ಟ-೩ರಲ್ಲಿ ಈ ಮಂಗಲಾಷ್ಟದ ಮಹತ್ತ್ವಕ್ಕೆ ಪುಷ್ಟಿಯನ್ನು ನೀಡುವಂತಿರುವ ಅನೇಕ ಪ್ರಾತಃಸ್ತೋತ್ರಗಳನ್ನು ಕೊಡಲಾಗಿದೆ. ಹೀಗೆ ಜಿಜ್ಞಾಸುಗಳಿಗೆ ಅನೇಕ ರೀತಿಯಲ್ಲಿ ಉಪಯುಕ್ತವೆನ್ನಿಸುವಂತೆ ಈ ಪ್ರಕಾಶನ ಸಿದ್ಧವಾಗಿದೆ.

ಪ್ರಸ್ತುತ ಕೃತಿಯನ್ನು ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ದೀಕ್ಷೆ ಉಳ್ಳ, ಪಾಠ-ಪ್ರವಚನದಲ್ಲಿ ಆಸಕ್ತಿ ಉಳ್ಳ, ಬೆಂಗಳೂರಿನ **ಶ್ರೀಪ್ರಮೋದ್ ಟಿ.ಎಸ್. ತುಮಕೂರು** ಇವರು ತಮ್ಮ ತಂದೆ ದಿ. **ಟಿ.ಕೆ.ಸುಧೀಂದ್ರ ತುಮಕೂರು** ಹಾಗೂ ತಮ್ಮ ಚಿಕ್ಕ ತಾತ ದಿ. **ಶ್ರೀಟಿ.ನರಸಿಂಹಮೂರ್ತ್ಯಾಚಾರ್ಯ** (ಇವರು ಉತ್ತಮ ವಿದ್ವಾಂಸರು, ಪುರಾಣಿಕರು ಆಗಿದ್ದವರು), ಆಚಾರ್ಯ ಬೀದಿ, ಚಿಕ್ಕಪೇಟೆ, ತುಮಕೂರು ಇವರ ಪುಣ್ಯಸ್ಮರಣೆಗಾಗಿ ಪ್ರಾಯೋಜಿಸಿರುವರು. ಈ ಸೇವೆಗಾಗಿ ಇವರಿಗೆ ನಮ್ಮ ಪ್ರತಿಷ್ಠಾನ ವಿಶೇಷ ಶ್ರೇಯಸ್ಸನ್ನು ಹಾರೈಸುವುದು. ಈ ಸಂಪುಟದ ಡಿ.ಟಿ.ಪಿ ಕಾರ್ಯ ನಮ್ಮ ಶ್ರೀವ್ಯಾಸಮಧ್ವಸಂಶೋಧನಪ್ರತಿಷ್ಠಾನದ್ದು; ಸಹಕಾರ ಚಿ. ಸುದರ್ಶನ(ಆನಂದಪದ್ಮನಾಭ) ಹಾಗೂ ಶ್ರೀಪ್ರವೀಣಕಟ್ಟಿ ಅವರದು. ಕರಡು ತಿದ್ದುವ ಕಾರ್ಯ ಮಾಡಿದ್ದು ನನ್ನ ಪುತ್ರ ಡಾ. ಜಯಂತ ವ್ಯಾಸನಕೆರೆ; ವಿಶೇಷ ಸಹಕಾರ ನನ್ನ ಧರ್ಮಪತ್ನಿ ಚಿ.ಸೌ. ಜಯಶ್ರೀ ವ್ಯಾಸನಕೆರೆ ಹಾಗೂ ಸೊಸೆ ಚಿ.ಸೌ. ಶ್ರುತಿ ವ್ಯಾಸನಕೆರೆ ಇವರದ್ದು; ಮುದ್ರಣ ಕಾರ್ಯ ಬೆಂಗಳೂರಿನ ವಾಗರ್ಥ ಅವರದು; ಇವರೆಲ್ಲರಿಗೂ ನಮ್ಮ ಪ್ರತಿಷ್ಠಾನ ಋಣಿ

ಶ್ರೀಶ್ರೀಪಾದರಾಜರ ಆರಾಧನೆ (ಹೇಮಲಂಬಿ) ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯ
೦೮.೦೬.೨೦೧೭

ಶ್ರೀರಾಜರಾಜೇಶ್ವರ ಯತಿಕೃತ

# ಮಂಗಲಾಷ್ಟಕಮ್

- ೧ -

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥

ಅನು : ಭಗವಂತನಾದ ಶ್ರೀಹರಿಗೆ ಮಹಾಲಕ್ಷ್ಮಿಯೇ ಪತ್ನಿ, ಪದ್ಮೋದ್ಭವರಾದ ಬ್ರಹ್ಮದೇವರು ಪುತ್ರ, ಗರುಡನು ವಾಹನ, ಚಂದ್ರಶೇಖರನಾದ ಶಿವ ಮೊಮ್ಮಗ, ಇತರ ದೇವತೆಗಳಲ್ಲಿ ಹಿರಿಯನೆನ್ನಿಸಿದ ಶೇಷ ಇವನ ಹಾಸಿಗೆ, ಬ್ರಹ್ಮಾಂಡವೇ ಇವನ ಶ್ರೇಷ್ಠ ಮಂದಿರ, ಸುರರ ಗುಂಪುಗಳು ಪ್ರಭುವಾದ ಇವನಿಗೆ ಸೇವಕರು. ಇಂತಹ ಮೂರು ಲೋಕಗಳನ್ನು ಕುಟುಂಬವನ್ನಾಗಿ ಹೊಂದಿ ಅದನ್ನು ಪರಿಪಾಲಿಸುತ್ತಿರುವ ಶ್ರೀಹರಿಯು ಮಂಗಲವನ್ನು ನೀಡಲಿ.

- ೨ -

ಬ್ರಹ್ಮಾ ವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರು-
ಶ್ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ ।
ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ
ಸಸ್ತ್ರೀಕಾಃ ಸುರಪುಂಗವಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥

ಅನು: ಬ್ರಹ್ಮದೇವರು, ವಾಯುದೇವರು, ರುದ್ರದೇವರು, ಶೇಷದೇವರು, ಗರುಡದೇವರು, ದೇವೇಂದ್ರ ಹಾಗೂ ಕಾಮ, ಬೃಹಸ್ಪತ್ಯಾಚಾರ್ಯರು, ಚಂದ್ರಸೂರ್ಯರು, ವರುಣ ಹಾಗೂ ಅಗ್ನಿ, ಮನು ಹಾಗೂ ಯಮ, ಕುಬೇರ ಹಾಗೂ ಗಣೇಶ, ಅಶ್ವಿನಿದೇವತೆಗಳು, ನಿರ್ಋತಿ, ಮರುದ್ಗಣಗಳು, ಪರ್ಜನ್ಯ ಹಾಗೂ ಮಿತ್ರನಾಮಕ ಸೂರ್ಯ ಮೊದಲಾದ ಸಕಲ ಸುರಶ್ರೇಷ್ಠರು ತಮ್ಮ ಪತ್ನೀ ಸಮೇತರಾಗಿ ನಮಗೆ ಪ್ರತಿದಿನವು ಮಂಗಳವನ್ನು ಉಂಟುಮಾಡಲಿ.

- ೩ -

ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ
[೧]ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।

---

೧. ಶ್ರೀಮಾನತ್ರಿಮರೀಚ್ಯುಚಥ್ಯಪುಲಹಾಃ (ಪಾ.)

ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ
[೧]ಶ್ರೀವಿಷ್ಣೋಃ ಪದಪದ್ಮಚಿಂತನರತಾಃ ಕುರ್ವಂತು ನೋ ಮಂಗಲಮ್ ॥

ಅನು: ಮಹಾವಿಷ್ಣುವಿನ ಪಾದಕಮಲವನ್ನು ಧ್ಯಾನಿಸುವುದರಲ್ಲೇ ನಿರತರಾದ ಶ್ರೀಮಾನ್ ವಿಶ್ವಾಮಿತ್ರ, ಪರಾಶರ, ಔರ್ವ, ಭೃಗು, ಅಗಸ್ತ್ಯ, ಪುಲಸ್ತ್ಯ, ಕ್ರತು, ಅತ್ರಿ, ಮರೀಚಿ, ಕೌತ್ಸ ಪುಲಹ, ಶಕ್ತಿ, ವಸಿಷ್ಠ ಅಂಗೀರಸ, ಮಾಂಡವ್ಯ, ಜಮದಗ್ನಿ ಗೌತಮ, ಭರದ್ವಾಜ ಮೊದಲಾದ ತಪಸ್ವಿಗಳು ನಮಗೆ ಮಂಗಲವನ್ನು ಉಂಟು ಮಾಡಲಿ.

– ೪ –

ಮಾಂಧಾತಾ ನಹುಷೋಽಂಬರೀಷಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮಸುತೋ ನಳೋ ದಶರಥೋ ರಾಮೋ ಯಯಾತಿರ್ಯದುಃ
ಇಕ್ಷ್ವಾಕುಶ್ಚ ವಿಭೀಷಣಶ್ಚ [೨]ಭರತಶ್ಚೋತ್ತಾನಪಾದೋ ಧ್ರುವ-
ಶ್ಚೇತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥

ಅನು: ಮಾಂಧಾತಾ, ನಹುಷ, ಅಂಬರೀಷ, ಮತ್ತು ಸಗರ, ಪೃಥುರಾಜ, ಕಾರ್ತವೀರ್ಯಾರ್ಜುನ, ಯುಧಿಷ್ಠಿರ, ನಳ, ದಶರಥ, ಶ್ರೀರಾಮ, ಯಯಾತಿ, ಯದು, ಇಕ್ಷ್ವಾಕು, ವಿಭೀಷಣ, ಭರತ, ಉತ್ತಾನಪಾದ ಮತ್ತು ಧ್ರುವ ಇವರೇ ಮೊದಲಾದ ಭೂಮಿಯಲ್ಲಿನ ರಾಜರು ಸದಾ ನಮಗೆ ಮಂಗಲವನ್ನುಂಟುಮಾಡಲಿ.

– ೫ –

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ ।
ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕೌ
ಇತ್ಯಾದ್ಯಾ ಭುವಿ [೩]ಭೂಧರಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥

ಅನು: ಶೋಭಾಯಮಾನವಾದ ಮೇರುಪರ್ವತ, ಹಿಮಾಲಯ, ಮಂದರಗಿರಿ, ಅದರಂತೆ ಕೈಲಾಸಪರ್ವತ, ಮಾಹೇಂದ್ರಪರ್ವತ, ಮಲಯ-ಪರ್ವತ, ವಿಂಧ್ಯಪರ್ವತ, ನಿಷಧಪರ್ವತ, ಸಿಂಹಾಚಲ, ರೈವತಪರ್ವತ, ಸಹ್ಯಾದ್ರಿ,

---

೧. ಶ್ರೀಮದ್ವಿಷ್ಣುಪದಾಂಬುಜೈಕಶರಣಾಃ (ಪಾ.)
೨. ಭರತಶ್ಚೋತ್ತಾನಪಾದಧ್ರುವಾಶ್ಚೇತ್ಯಾದ್ಯಾ (ಪಾ.)
೩. ಭೂಧರಾಶ್ಚ ಸತತಂ (ಪಾ.)

ಶ್ರೇಷ್ಠವಾದ ಗಂಧಮಾದನಪರ್ವತ, ಮೈನಾಕಪರ್ವತ, ಗೋಮಂತಪರ್ವತ ಇವೇ ಮೊದಲಾದ ಭೂಮಿಯಲ್ಲಿನ ಪರ್ವತಗಳು ಪ್ರತಿದಿನದಲ್ಲೂ ನಮಗೆ ಮಂಗಳವನ್ನು ಉಂಟುಮಾಡಲಿ.

– ೬ –

ಗಂಗಾ ಸಿಂಧುಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗುಸರಯೂ ಶ್ರೀಗಂಡಕೀ ಗೋಮತೀ ।
ಕಾವೇರೀ ಕಪಿಲಾ [೧]ವರಾಹತನಯಾ ನೇತ್ರಾವತೀತ್ಯಾದಯೋ
ನದ್ಯಃ [೨]ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥

ಅನು: ಗಂಗೆ, ಸಿಂಧು ಮತ್ತು ಸರಸ್ವತೀ, ಯಮುನೆ, ಗೋದಾವರೀ, ನರ್ಮದೆ, ಕೃಷ್ಣವೇಣೀ, ಭೀಮರಥೀ, ಫಲ್ಗು ಸರಯೂ, ಶ್ರೀಗಂಡಕೀ, ಗೋಮತೀ, ಕಾವೇರೀ, ಕಪಿಲಾ, ತುಂಗಭದ್ರಾ, ನೇತ್ರಾವತೀ ಇವೇ ಮೊದಲಾದ ಶ್ರೀಹರಿಯ ಪಾದಕಮಲದಿಂದ ಜನಿಸಿದಂತಹ ನದಿಗಳು ನಮಗೆ ಸದಾ ಮಂಗಲವನ್ನುಂಟುಮಾಡಲಿ.

– ೭ –

ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ ।
ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ
[೩]ಶ್ರೀವಿಷ್ಣೋರ್ಗುಣರಾಶಿಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥

ಅನುವಾದ: ಸದಾ ಮಹಾವಿಷ್ಣುವಿನ ಗುಣರಾಶಿಗಳನ್ನೇ ಕೊಂಡಾಡುವ; ವೇದಗಳು, ಬಗೆಬಗೆಯ ಉಪನಿಷತ್ತಿನ ಸಮೂಹಗಳು, ವೇದಾಂಗಗಳು, ಪುರಾಣಗಳು ಹಾಗೆಯೇ ವೇದಾಂತಗಳು, ಮಂತ್ರ-ತಂತ್ರ-ತರ್ಕ ಶಾಸ್ತ್ರಗಳು, ಸ್ಮೃತಿಗಳ ರಾಶಿ, ಕಾವ್ಯಗಳು, ಅಲಂಕಾರಗ್ರಂಥಗಳು, ನೀತಿ ಗ್ರಂಥಗಳು, ನಾಟಕಗಳು ಮತ್ತು ನಾನಾವಿಧವಾದ ಶಬ್ದಗಳು ನಮಗೆ ಸದಾ ಮಂಗಳವನ್ನುಂಟುಮಾಡಲಿ.

---

೧. ಪ್ರಯಾಗಕಿಟಿಜಾ (ಪಾ.)

೨. ಶ್ರೀಹರಿಪಾದಪಂಕಜಭುವಃ (ಪಾ.)

೩. ಶ್ರೀವಿಷ್ಣೋರ್ಗುಣನಾಮಕೀರ್ತನಪರಾಃ (ಪಾ.)

– ೮ –

ಆದಿತ್ಯಾದಿನವಗ್ರಹಾಃ ಶುಭಕರಾ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸಯೋಗಕಾಶ್ಚ ತಿಥಯಸ್ತದ್ದೇವತಾಸ್ತದ್ಗಣಾಃ ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥

ಅನು: ಮಂಗಳಕರವಾದ ಸೂರ್ಯ ಮೊದಲಾದ ನವಗ್ರಹಗಳು, ಮೇಷ ಮೊದಲಾದ ರಾಶಿಗಳು, ನಕ್ಷತ್ರಗಳು, ಯೋಗಗಳು, ತಿಥಿಗಳು ಅವುಗಳ ದೇವತೆಗಳು ಹಾಗೂ ಗಣಗಳು, ತಿಂಗಳುಗಳು, ಸಂವತ್ಸರಗಳು, ಋತುಗಳು, ದಿವಸಗಳು, ಸಂಧ್ಯೆಗಳು, ರಾತ್ರಿಗಳು ಮತ್ತು ಸಕಲ ಸ್ಥಾವರ-ಜಂಗಮಗಳು ಪ್ರತಿದಿನದಲ್ಲೂ ನಮಗೆ ಮಂಗಳವನ್ನುಂಟು ಮಾಡಲಿ.

– ೯ –

ಇತ್ಯೇತದ್ವರಮಂಗಲಾಷ್ಟಕಮಿದಂ [೧]ಶ್ರೀರಾಜರಾಜೇಶ್ವರೈ-
ರಾಖ್ಯಾತಂ ಜಗತಾಮಭೀಷ್ಟಫಲದಂ ಸರ್ವಾಶುಭಧ್ವಂಸನಮ್ ।
ಮಾಂಗಲ್ಯಾದಿಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇ-
ದ್ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥

॥ ಇತಿ ಶ್ರೀರಾಜರಾಜೇಶ್ವರಯತಿಕೃತ ಮಂಗಲಾಷ್ಟಕಮ್ ॥

ಅನು: ಈ ರೀತಿಯಾದ ಶ್ರೇಷ್ಠವಾದ ಮಂಗಲಾಷ್ಟಕವು ಶ್ರೀರಾಜರಾಜೇಶ್ವರರಿಂದ ಹೇಳಲ್ಪಟ್ಟಿತು; ಇದು ಲೋಕಗಳಿಗೆ ಬಯಸಿದ ಫಲವನ್ನು ನೀಡುವಂತಹುದು; ಸಕಲ ಅನಿಷ್ಟಗಳನ್ನು ಪರಿಹಾರ ಮಾಡುವಂತಹುದು; ಇದನ್ನು ವಿವಾಹ ಮೊದಲಾದ ಮಂಗಲಕಾರ್ಯಗಳಲ್ಲಿ, ಸಂಧ್ಯಾಕಾಲಗಳಲ್ಲಿ ಸಹ ಯಾವನು ಸತತ ಪಠಿಸುವನೋ ಅಂತಹ ಮಾನವನು ಧರ್ಮ, ಅರ್ಥ ಮೊದಲಾದ ಬಯಸಿದ ಸಕಲ ಫಲಗಳನ್ನು ಪಡೆದುಕೊಳ್ಳುವನು.

*****

---

೧. ಶ್ರೀರಾಜರಾಜೇಶ್ವರೇಣಾಖ್ಯಾತಂ (ಪಾ.)

॥ ಶ್ರೀಃ ॥

## ಶ್ರೀರಾಜರಾಜೇಶ್ವರಯತಿಕೃತ

# ಮಂಗಲಾಷ್ಟಕಮ್

ಶ್ರೀಹರಿಗುರುಗಳನ್ನು ಕುರಿತ ಮಂಗಲಾಷ್ಟಕಗಳು ಸಂಸ್ಕೃತದಲ್ಲಿ ವಿಪುಲವಾಗಿ ದೊರೆಯುತ್ತವೆ. ಉಪನಯನ, ವಿವಾಹಾದಿ ಶುಭಕಾರ್ಯಗಳಲ್ಲಿ ಮಂಗಲಾಷ್ಟಕದ ಪಠನೆ ಅತ್ಯಗತ್ಯ. ವಿವಾಹ ಕಾರ್ಯದ ಮಟ್ಟಿಗೆ ಸಕಲ ವೈಷ್ಣವರು ಇದನ್ನು ತಪ್ಪದೇ ಪಠಿಸುವ ಸಂಪ್ರದಾಯ ಬಂದಿರುವುದು ಇದರ ಮಹತ್ತ್ವಕ್ಕೆ ಸಾಕ್ಷಿ. ಉಡುಪಿಯ ಪಲಿಮಾರುಮಠದ ಶ್ರೀರಾಜರಾಜೇಶ್ವರರೆಂಬ ಯತಿಗಳು ರಚಿಸಿದ ಈ ಕೃತಿ ಮನೆಮನೆಗಳಲ್ಲಿ ಪಠಿತವಾಗುತ್ತಿರುವ ವಿಶಿಷ್ಟ ಕೃತಿ. ಹೆಚ್ಚಾಗಿ ಇದು ವಿವಾಹಾದಿ ಮಹೋತ್ಸವಗಳಲ್ಲಿ ಪಠಿತವಾಗುತ್ತಿದ್ದರೂ, ವಾಸ್ತವವಾಗಿ ಪ್ರತಿನಿತ್ಯವೂ ಪಠಿಸಬೇಕಾದ ಕೃತಿ. ಈ ವಿವರ ಈ ಅಷ್ಟಕದ ಕೊನೆಯಲ್ಲಿ ಸ್ಪಷ್ಟವಾಗಿಯೇ ಬಂದಿದೆ. ಅದರಲ್ಲೂ ಮೂರು ಸಂಧ್ಯಾಕಾಲಗಳಲ್ಲಿ ಪಠಿಸುವುದು ಮತ್ತಷ್ಟು ಶ್ರೇಯಸ್ಕರ ಎಂದೇ ಅಲ್ಲಿಯ ಉಲ್ಲೇಖ. ಇದರಲ್ಲಿ ಮುಖ್ಯವಾಗಿ ಲಕ್ಷ್ಮೀನಾರಾಯಣರು, ಬ್ರಹ್ಮಾದಿ ದೇವತೆಗಳು, ವಿಶ್ವಾಮಿತ್ರಾದಿ ಮುನಿಗಳು, ಶ್ರೀಮೇರು ಮೊದಲಾದ ಪರ್ವತಗಳು, ಗಂಗಾದಿ ನದಿಗಳು, ಮಾಂಧಾತ ಮೊದಲಾದ ರಾಜರು, ವೇದಾದಿ ಸಕಲ ಸಚ್ಛಾಸ್ತ್ರಗಳು, ಆದಿತ್ಯಾದಿ ಸಕಲ ಗ್ರಹಗಳು, ಸಕಲ ಬಗೆಯ ಮಂಗಲಗಳನ್ನು ಕರುಣಿಸಲಿ ಎಂಬುದು ಮುಖ್ಯ ವಿಷಯ. ಆದರಿಂದಾಗಿ ಇದರ ಪಠನೆ ಒಟ್ಟಾಗಿ ಜಗತ್ತಿನ ಪರಿಕಲ್ಪನೆ, ಜಗನ್ನಾಥ, ಶ್ರೀಹರಿ ಮೊದಲಾದ ಸಕಲ ವಿಷಯಗಳನ್ನು ಸ್ಮರಣೆಗೆ ತಂದುಕೊಡುವ ಮೂಲಕ ಸಾಧನೆಗೆ ತುಂಬಾ ಉಪಯುಕ್ತವೆನ್ನಿಸುವುದು. ಲೌಕಿಕ ಜೀವನಕ್ಕೆ ರಾಷ್ಟ್ರಗೀತೆ ಹೇಗೋ, ಆಧ್ಯಾತ್ಮಿಕ ಜೀವನಕ್ಕೆ ಇಂತಹ ಮಂಗಲಾಷ್ಟಕ. ಒಂದರ್ಥದಲ್ಲಿ ಇದನ್ನು ವಿಶ್ವಗೀತೆ ಎನ್ನಬಹುದು. ಮನೆಯಲ್ಲಿನ ಸಕಲರು ಸಹ ಪ್ರತಿನಿತ್ಯ ಪಠಿಸಿದ್ದಲ್ಲಿ ಸಕಲ ಅನಿಷ್ಟಗಳು ಪರಿಹಾರವಾಗಿ ಸಕಲ ಅಭೀಷ್ಟಗಳು ಸಿದ್ಧಿಸುವವು. ಮನಸ್ಸಿಗೆ ನೆಮ್ಮದಿ, ಮನೆಗೆ ಮಂಗಳ, ಮನೆಯ ಜನರಿಗೆ ಒಳಿತು, ಸಮಾಜಕ್ಕೆ ಶುಭ; ಹೀಗೆ ಸಕಲ ರೀತಿಯಲ್ಲೂ ಸಹ ಶ್ರೇಯಸ್ಸಿಗೆ ಕಾರಣವಾಗುವ ಅಪೂರ್ವ ಕೃತಿ ಇದಾಗಿದೆ. ಅರ್ಥಾನುಸಂಧಾನಪೂರ್ವಕ ಪಠಿಸಿದಾಗ ಇಂತಹ ಕೃತಿಗಳಿಂದ ಪೂರ್ಣಪ್ರಯೋಜನ ಪಡೆಯಲು ಸಾಧ್ಯ.

★★

## - ೧ -

## ವಿಶ್ವಕುಟುಂಬಿ ಶ್ರೀಹರಿ

**ಲಕ್ಷ್ಮೀರ್ಯಸ್ಯ [೧]ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್[೨] [೩]ರಥಃ**
**ಪೌತ್ರಶ್ಚಂದ್ರವಿಭೂಷಣಃ ಸುರಗುರುಃ ಶೇಷಶ್ಚ ಶಯ್ಯಾ ಪುನಃ।**
**ಬ್ರಹ್ಮಾಂಡಂ ವರಮಂದಿರಂ ಸುರಗಣಾ ಯಸ್ಯ ಪ್ರಭೋಃ [೪]ಸೇವಕಾಃ**
**ಸ ತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್[೫] ॥**

ಪದಚ್ಛೇದ: ಲಕ್ಷ್ಮೀಃ, ಯಸ್ಯ, ಪರಿಗ್ರಹಃ, ಕಮಲಭೂಃ, ಸೂನುಃ, ಗರುತ್ಮಾನ್, ರಥಃ, ಪೌತ್ರಃ, ಚಂದ್ರವಿಭೂಷಣಃ, ಸುರಗುರುಃ, ಶೇಷಃ, ಚ, ಶಯ್ಯಾ, ಪುನಃ, ಬ್ರಹ್ಮಾಂಡಂ, ವರಮಂದಿರಂ, ಸುರಗಣಾಃ, ಯಸ್ಯ, ಪ್ರಭೋಃ, ಸೇವಕಾಃ, ಸಃ, ತ್ರೈಲೋಕ್ಯಕುಟುಂಬಪಾಲನಪರಃ, ಕುರ್ಯಾತ್, ಹರಿಃ, ಮಂಗಲಮ್.

**ಅನು: ಭಗವಂತನಾದ ಶ್ರೀಹರಿಗೆ ಮಹಾಲಕ್ಷ್ಮಿಯೇ ಪತ್ನಿ, ಪದ್ಮೋದ್ಭವರಾದ ಬ್ರಹ್ಮದೇವರು ಪುತ್ರ, ಗರುಡನು ವಾಹನ, ಚಂದ್ರಶೇಖರನಾದ ಶಿವ ಮೊಮ್ಮಗ, ಇತರ ದೇವತೆಗಳಲ್ಲಿ ಹಿರಿಯನೆನ್ನಿಸಿದ ಶೇಷ ಇವನ ಹಾಸಿಗೆ, ಬ್ರಹ್ಮಾಂಡವೇ ಇವನ ಶ್ರೇಷ್ಠ ಮಂದಿರ, ಸುರರ ಗುಂಪುಗಳು ಪ್ರಭುವಾದ ಇವನಿಗೆ ಸೇವಕರು. ಇಂತಹ ಮೂರು ಲೋಕಗಳನ್ನು ಕುಟುಂಬವನ್ನಾಗಿ ಹೊಂದಿ ಅದನ್ನು ಪರಿಪಾಲಿಸುತ್ತಿರುವ ಶ್ರೀಹರಿಯು ಮಂಗಲವನ್ನು ನೀಡಲಿ.**

ವಿ. : ೧. ಶ್ರೀಹರಿಯು ಸಕಲ ದೇವತೆಗಳಿಗೂ ಒಡೆಯನಾದ ಸರ್ವೋತ್ತಮ ದೇವತೆ. ಅನಂತಾನಂತ ಕಲ್ಯಾಣಗುಣಪೂರ್ಣ ಹಾಗೂ ಸಕಲದೋಷದೂರ ಎಂಬುದು ಅವನ ಹಿರಿಮೆ. ಸರ್ವತಂತ್ರಸ್ವತಂತ್ರ ಎಂಬುದು ಅವನ ಮಹಾಮಹಿಮೆ. ಅನಾದಿ ಕಾಲದಿಂದ

---

೧. ಪತ್ನೀಪರಿಜನಾದಾನಮೂಲಶಾಪಾಃ ಪರಿಗ್ರಹಾಃ। – ಇತ್ಯಮರಃ।

೨. ಗರುತ್ಮಾನ್ ಗರುಡಸ್ತಾರ್ಕ್ಷ್ಯೋ ವೈನತೇಯಃ ಖಗೇಶ್ವರಃ।
ನಾಗಾಂತಕೋ ವಿಷ್ಣುರಥಃ ಸುಪರ್ಣಃ ಪನ್ನಗಾಶನಃ॥ – ಇತ್ಯಮರಃ
ಗರುತಃ ಪಕ್ಷಾಃ ಸಂತಿಸ್ಯ। 'ಮತುಪ್' (೫/೨/೯೪) ಯವಾದಿತ್ವಾತ್ 'ಝಯಃ' (೮/೨/೧೦) ಇತಿ ವತ್ವಂ ನ। – ವ್ಯಾ

೩. ಯಾನೇ ಚಕ್ರಿಣಿ ಯುದ್ಧಾರ್ಥೇ ಶತಾಂಗಃ ಸ್ಯಂದನೋ ರಥಃ। – ಇತ್ಯಮರಃ।

೪. ಸೇವಕಾರ್ಥ್ಯನುಜೀವಿನಃ। – ಇತ್ಯಮರಃ।
ಅರ್ಥೀ ಪುಮಾನ್ ಯಾಚಕೇ ಸ್ಯಾತ್ ಸೇವಕೇ ಚ ವಿವಾದಿನಿ। – ಇತಿ ಮೇದಿನಿ।

೫. ಶ್ವಃ ಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಲಂ ಶುಭಮ್। -- ಇತ್ಯಮರಃ।

ಅನಂತಕಾಲದವರೆಗಿನ ಸಕಲರನ್ನೂ ಪರಿಪಾಲಿಸುವವನು, ಜ್ಞಾನಾದಿಗಳನ್ನು ನೀಡು-ವವನು, ಸಕಲಕಾರ್ಯಗಳನ್ನು ಮಾಡಿಸುವವನು ಅವನೇ ಆಗಿರುವನು. ಅವನು ಸರ್ವಕಾರಣ. ವಿಶೇಷವಾಗಿ ಮುಕ್ತಿ ನೀಡುವ ಮಹಾಮಹಿಮೆ ಹೊಂದಿದವನು. ಅಂತಹ ಶ್ರೀಹರಿಯ ಸ್ಮರಣೆ ಅತ್ಯಂತ ಮಂಗಲಕರ.

೨. ಮಹಾಲಕ್ಷ್ಮಿಯು ಶ್ರೀಹರಿಯ ಪತ್ನಿ; ಪ್ರಕೃತಿಯ ಅಭಿಮಾನಿ ದೇವತೆ; ವೇದಾದಿ ಸಕಲ ವಾಙ್ಮಯದ ಅಭಿಮಾನಿ ದೇವತೆಯು ಇವರೇ ಆಗಿರುವರು; ಶ್ರೀ, ಭೂ, ದುರ್ಗಾ ಎಂಬ ಮೂರು ರೂಪಗಳಿಂದ ಕ್ರಮವಾಗಿ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಗೆ ಅಭಿಮಾನಿ ದೇವತೆಯಾಗಿರುವರು. ರುಗ್ಮಿಣೀ ಮೊದಲಾದ ಅನಂತ ರೂಪಗಳು ಇವರಿಗೆ. ಸಕಲ ವಾಙ್ಮನಸ ದೇವತೆ ಎಂಬುದು ಇವರ ಮತ್ತೊಂದು ಹಿರಿಮೆ. ಶ್ರೀಹರಿಯ ಆದೇಶದಂತೆ ಮುಕ್ತಿ ನೀಡುವ ಸಾಮರ್ಥ್ಯವೂ ಇವರಿಗಿದೆ. ಕೇವಲ ಅನಾಲೋಚನೆ ಮಾತ್ರದಿಂದ ಬ್ರಹ್ಮರುದ್ರಾದಿ ದೇವತೆಗಳಿಗಿಂತ ಮಿಗಿಲಾಗಿ ಇಡೀ ವಿಶ್ವವನ್ನು ತಿಳಿಯಬಲ್ಲ ಹಿರಿಮೆ ಇವರದು; ಆಲೋಚನೆ ಮಾತ್ರದಿಂದಲೇ ವೇದಾದಿ ಸಕಲ ಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಮಹಿಮೆಗಿಂತಲೂ ಹೆಚ್ಚಿನ ಶ್ರೀಹರಿಯ ಮಹಿಮೆಯನ್ನು ತಿಳಿಯಬಲ್ಲ ಮಹಾಸಾಮರ್ಥ್ಯ ಇವರದು. ಬ್ರಹ್ಮಾದಿ ಸಕಲ ದೇವತೆಗಳ ತಾಯಿಯಾದ್ದರಿಂದ ಜಗದಂಬೆ ಎಂದೂ ಇವರು ಪ್ರಸಿದ್ಧ. ಇಂತಹ ಮಹಾಲಕ್ಷ್ಮಿಯು ಶ್ರೀಹರಿಯ ಪತ್ನಿಯಾಗಿರುವಳು[೧]; **ಪರಿಗ್ರಹ = ಪತ್ನಿ.**

೩. '**ಕಮಲಭೂಃ**' ಎಂದರೆ ಕಮಲದಿಂದ ಅವತರಿಸಿದ ಶ್ರೀಬ್ರಹ್ಮದೇವರು ಎಂದರ್ಥ. ಬ್ರಹ್ಮ ಎಂಬ ಪದದಿಂದ ವಾಯುದೇವರು ಸಹ ವಿಹಿತ. ಬ್ರಹ್ಮವಾಯುಗಳಿಬ್ಬರೂ

---

೧. ಮಹಾಲಕ್ಷ್ಮಿಯ ವಿಶೇಷ ಮಾಹಾತ್ಮ್ಯವು ಶ್ರೀಸ್ತುತಿ ಎಂದೇ ಪ್ರಸಿದ್ಧವಾಗಿರುವ ದ್ವಾದಶಸ್ತೋತ್ರದ ಎಳನೆಯ ಅಧ್ಯಾಯದಲ್ಲಿ ವರ್ಣಿತವಾಗಿದೆ. ಅದರಲ್ಲಿ ಮಹಾಲಕ್ಷ್ಮಿಯ ಬಗೆಬಗೆಯ ಹಿರಿಮೆ ವರ್ಣಿತವಾಗಿದ್ದು ಅದರ ಮೊದಲ ಶ್ಲೋಕದಲ್ಲಿ ಮಹಾಲಕ್ಷ್ಮಿಯ ವಿಶೇಷವಾದ ಸಾಮರ್ಥ್ಯದ ನಿರೂಪಣೆಯೂ, ಮೂರನೆಯ ಶ್ಲೋಕದಲ್ಲಿ ಅವರು ನೀಡುವ ವಿಶೇಷ ಫಲಗಳ ನಿರೂಪಣೆಯು ಪ್ರತಿಪಾದಿತವಾಗಿದೆ:

ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿವೃತ್ತಿಪ್ರಕಾಶನಿಯಮಾವೃತಿಬಂಧಮೋಕ್ಷಾಃ।
ಯಸ್ಯಾ ಅಪಾಂಗಲವಮಾತ್ರತ ಊರ್ಜಿತಾ ಸಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ॥
ಧರ್ಮಾರ್ಥಕಾಮಸುಮತಿಪ್ರಚಯಾದ್ಯಶೇಷಸನ್ಮಂಗಲಂ ವಿದಧತೇ ಯದಪಾಂಗಲೇಶಮ್।
ಆಶ್ರಿತ್ಯ ತತ್ಪ್ರಣತಸತ್ಪ್ರಣತಾ ಅಪೀಡ್ಯಾಃ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ॥ (೭/೧,೩)

೨. ಬ್ರಹ್ಮದೇವರ ಸೃಷ್ಟಿಕಾರ್ಯರೂಪವಾದ ವಿಶೇಷ ಮಹಿಮೆಯು ದ್ವಾದಶಸ್ತೋತ್ರದ ಈ ಕೆಳಗಿನ ಶ್ಲೋಕದಲ್ಲಿ ವರ್ಣಿತವಾಗಿದೆ:

ಶೇಷಾಹಿವೈರಿಶಿವಶಕ್ರಮನುಪ್ರಧಾನಚಿತ್ರೋರುಕರ್ಮರಚನಂ ಯದಪಾಂಗಲೇಶಮ್।
ಆಶ್ರಿತ್ಯ ವಿಶ್ವಮಖಿಲಂ ವಿದಧಾತಿ ಧಾತಾ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ॥ (೭/೫)

ಶ್ರೀಹರಿಯ ಪುತ್ರರು. ಕಮಲದ ಅಭಿಮಾನಿ ದೇವತೆ ಸಾಕ್ಷಾತ್ ಮಹಾಲಕ್ಷ್ಮೀ. ಆದ್ದರಿಂದ ನಾರಾಯಣನ ನಾಭಿಕಮಲದಿಂದ ಅವತರಿಸಿದ ಶ್ರೀಬ್ರಹ್ಮದೇವರು ಲಕ್ಷ್ಮೀನಾರಾಯಣರ ಪುತ್ರ ಎಂದೇ ಆಗುವುದು.

೪. **ಗರುತ್ಮಾನ್** - [೧]**'ಗರುಡ'**ನು ರಥ ಎಂದರೆ ವಾಹನ ಎಂದರ್ಥ. ಕೋಶಗಳಲ್ಲೂ ಗರುಡನನ್ನು ವಿಷ್ಣುರಥ ಎಂದು ಕರೆದಿರುವುದು ಗಮನಾರ್ಹ. ಗರುತ್ ಎಂದರೆ ರೆಕ್ಕೆ, ರೆಕ್ಕೆಗಳನ್ನು ಹೊಂದಿರುವವನು ಎಂಬುದು ಗರುತ್ಮಾನ್ ಶಬ್ದದ ಅರ್ಥ. ಗರುಡನು ಇಂದ್ರಾದಿದೇವತೆಗಳಿಗಿಂತ ಮಿಗಿಲಾದ ಹಿರಿಮೆ ಹೊಂದಿದ ದೇವತೆ. ಗರುಡ ವಾಹನ ಎಂಬುದು ಶ್ರೀಹರಿಯ ವಿಶೇಷ ಹಿರಿಮೆ. ಬ್ರಹ್ಮ ಹಂಸವಾಹನ, ಶಿವ ನಂದಿವಾಹನ. ಆದರೆ ಹಂಸ ನಂದಿಗಳಿಗಿಂತ ಮಿಗಿಲಾದ ಗಮನಸಾಮರ್ಥ್ಯ ಗರುಡನದು. ಅಂತಹ ಗರುಡನನ್ನು ವಾಹನವನ್ನಾಗಿ ಮಾಡಿಕೊಂಡ ಶ್ರೀಹರಿ ಸರ್ವದೇವೋತ್ತಮ ಎಂಬ ಭಾವ ಇದರಿಂದ ಸೂಚಿತ.

೫. **'ಚಂದ್ರವಿಭೂಷಣ'**[೨] ಎಂದರೆ ಚಂದ್ರಶೇಖರನಾದ ಶಿವ ಎಂದರ್ಥ. ಬ್ರಹ್ಮದೇವರು ವಿಷ್ಣುವಿನ ಮಗನಾದರೆ, ಶಿವನು ಬ್ರಹ್ಮದೇವರ ಪುತ್ರ. ಆದ್ದರಿಂದ ಶಿವ ಮಹಾವಿಷ್ಣುವಿಗೆ ಮೊಮ್ಮಗ ಎಂದರ್ಥ. ಗರುಡ-ಶೇಷರು ರುದ್ರದೇವರಿಗೆ ಸಮನಾದವರು. ಅವರು ಸಹ ಬ್ರಹ್ಮದೇವರ ಪುತ್ರರಾದ್ದರಿಂದ, ಅವರೂ ಸಹ ಶ್ರೀಹರಿಗೆ ಪೌತ್ರರೇ ಆಗಿರುವರು.

೬. [೩]**'ಶೇಷ'** ಎಂದರೆ ಆದಿಶೇಷ ಎಂದರ್ಥ. ಸಾವಿರ ಮುಖದ ದೇವತೆ ಈ ಶೇಷ. ಇಂದ್ರಾದಿ ಸಕಲದೇವತೆಗಳಿಗೂ ಗುರು ಎಂಬುದು ಇವರ ಇನ್ನೊಂದು ಹಿರಿಮೆ. ಇವರು ಶ್ರೀಹರಿಯ ಹಾಸಿಗೆಯಾಗಿದ್ದು ಸದಾಕಾಲ ಆತನನ್ನು ಸೇವಿಸುತ್ತಿರುವ ಭಾಗ್ಯಶಾಲಿಗಳಾಗಿರುವರು. **'ಸುರಗುರು'** ಎಂಬ ಇಲ್ಲಿಯ ವಿಶೇಷಣವು ಪರಸ್ಪರ ಸಮರಾದ ಗರುಡ-ಶೇಷ-ರುದ್ರ ಈ ಮೂವರಿಗೂ ಅನ್ವಯಿಸುವುದು.

---

೧. ದ್ವಾದಶಸ್ತೋತ್ರದಲ್ಲಿ ನಿರೂಪಿತವಾಗಿರು ಗರುಡನ ಹಿರಿಮೆ ಹೀಗಿದೆ:
ನಾಗಾರಿರುಗ್ರಬಲಪೌರುಷ ಆಪ ವಿಷ್ಣೋರ್ವಾಹತ್ವಮುತ್ತಮಜವೋ ಯದಪಾಂಗಲೇಶಮ್ ।
ಆಶ್ರಿತ್ಯ ಶಕ್ರಮುಖದೇವಗಣೈರಚಿಂತ್ಯಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ (೭/೮)

೨. ದ್ವಾದಶಸ್ತೋತ್ರದಲ್ಲಿ ಸಂಗ್ರಹಿತವಾಗಿರುವ ಶಿವನ ಮಹಿಮೆ ಈ ತೆರನಾಗಿದೆ:
ಶಕ್ರೋಗ್ರದೀಧಿತಿಹಿಮಾಕರಸೂರ್ಯಸೂನುಪೂರ್ವಂ ನಿಹತ್ಯ ನಿಖಿಲಂ ಯದಪಾಂಗಲೇಶಮ್ ।
ಆಶ್ರಿತ್ಯ ನೃತ್ಯತಿ ಶಿವಃ ಪ್ರಕಟೋರುಶಕ್ತಿಃ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ (೭/೬)

೩. ದ್ವಾದಶಸ್ತೋತ್ರದಲ್ಲಿ ವರ್ಣಿತವಾಗಿರುವ ಶೇಷದೇವರ ಹಿರಿಮೆ ಹೀಗಿದೆ:
ತತ್ಪಾದಪಂಕಜಮಹಾಸನತಾಮವಾಪ ಶರ್ವಾದಿವಂದ್ಯಚರಣೋ ಯದಪಾಂಗಲೇಶಮ್ ।
ಆಶ್ರಿತ್ಯ ನಾಗಪತಿರನ್ಯಸುರೈರ್ದುರಾಪಾಂ ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥ (೭/೭)

೭. **'ಬ್ರಹ್ಮಾಂಡಂ ವರಮಂದಿರಂ'** : ಬ್ರಹ್ಮಾಂಡ ಎಂದರೆ ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ ಹಾಗೂ ಸತ್ಯಂ ಎಂಬ ಏಳು ಲೋಕಗಳು ಹಾಗೂ ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ ಹಾಗೂ ಪಾತಾಲ ಎಂಬ ಏಳು ಅಧೋಲೋಕಗಳನ್ನು ಒಳಗೊಂಡ ವಿಶ್ವ ಎಂದರ್ಥ. ಒಂದು ಬಾರಿಗೆ ಒಂದೇ ಬ್ರಹ್ಮಾಂಡ ಎಂಬ ಅರ್ಥವನ್ನು ಸೂಚಿಸಲು ಬ್ರಹ್ಮಾಂಡಂ ಎಂಬ ಏಕವಚನದ ಪ್ರಯೋಗ ಅರ್ಥವತ್ತಾದುದು:

'ಏಕಮಂಡಂ ಬಹುತ್ವೇನ ಪ್ರತ್ಯೇಕಂ ರೋಮಕೂಪಗಮ್ ।
ಬ್ರಹ್ಮಾಽಪಶ್ಯತ್ ತಥಾಽಽತ್ಮಾನಂ ಹರೇಸ್ತೇಷು ಪೃಥಕ್ ಪೃಥಕ್'[೧] ॥

– ಇತಿ ಬ್ರಹ್ಮಾಂಡೇ ।

'ಬೃಹದಂಡಮಭೂದೇಕಮ್' ಇತಿ ಚ ಭಾರತೇ – ಭಾ.ತಾ. (೩/೧೨/೪೦)

೮. ಇಲ್ಲಿಯ **'ವರ'** ಎಂಬ ವಿಶೇಷಣದಿಂದ ಬ್ರಹ್ಮಾಂಡವು ಶ್ರೀಹರಿಯಿಂದ ಅತ್ಯಂತ ಭಿನ್ನವಾದುದೇ ಹೊರತು, ಶ್ರೀಹರಿಯು ಅದಕ್ಕೆ ಉಪಾದಾನಕಾರಣನಲ್ಲ ಎಂಬ ವಿಶೇಷಾಂಶ ಸೂಚಿತವಾಗುವುದು. ಇದರಿಂದ ವಿಶಿಷ್ಟಾದ್ವೈತ ಮತದ ಜಗತ್ತಿಗೆ ಬ್ರಹ್ಮೋಪಾದಾನತ್ವವೆಂಬ ನಿಲುವು ನಿರಾಕೃತವಾಗುವುದು.

೯. **'ಸುರಗಣಾಃ'** ಎಂದರೆ ದೇವತೆಗಳ ಗುಂಪು ಎಂದರ್ಥ. ಸುರಾಃ ಎಂದು ಕರೆಯದೆ, ಸುರಗಣಾಃ ಎಂದಿರುವುದು ಬ್ರಹ್ಮಶೇಷಾದಿ ಸಕಲ ದೇವತೆಗಳ ಪದವಿಗಳಿಗೂ ಸಹ ಆಯಾ ಗುಂಪಿನ ಜೀವರೇ ಅರ್ಹರು. ಅಂತಹ ಗುಂಪುಗಳು ಅನಂತ ಎಂಬುದನ್ನು ಸೂಚಿಸಲು ಎಂದು ತಿಳಿಯಬೇಕು:

ಪೂರ್ತಿಶ್ಚ ನೈವ ನಿಯಮಾದ್ಭವಿತಾ ಹಿ ಯಸ್ಮಾತ್
ತಸ್ಮಾತ್ ಸಮಾಪ್ತಿಮಪಿ ಯಾಂತಿ ನ ಜೀವಸಂಘಾಃ ।
ಆನಂತ್ಯಮೇವ ಗಣಶೋಽಸ್ತಿ ಯತೋ ಹಿ ತೇಷಾ-
ಮಿತ್ಥಂ ತತಃ ಸಕಲಕಾಲಗತಾ ಪ್ರವೃತ್ತಿಃ ॥ ಮ.ಭಾ.ತಾ.ನಿ. (೧/೧೯)

೧೦. **'ಸೇವಕಾಃ'** ಬ್ರಹ್ಮಾದಿ ಸಕಲ ಸುರರು ಸಹ ಶ್ರೀಹರಿಯ ಸೇವಕರು ಎಂಬುದಾಗಿಯೇ ಉಪಾಸನೆ ವಿಹಿತ. ಇದು ಶ್ರೀಮದಾಚಾರ್ಯರು ತಿಳಿಸಿರುವ ಪ್ರಮೇಯಕ್ಕೆ ಅನುಗುಣವೆನ್ನಿಸುವ ಮಾತು:

ರಮಾಬ್ರಹ್ಮಾದಯಸ್ತಸ್ಯ ಪರಿವಾರತ ಏವ ತು (ಸದಾಚಾರಸ್ಮೃತಿ)
ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾ ಪ್ರಧಾನತಃ (ಅನುವ್ಯಾಖ್ಯಾನ)

---

೧. ಸ್ವಯಮೇಕಂ ಚ ಬಹುವತ್ ಪ್ರತ್ಯೇಕಂ ರೋಮಕೂಪಗಮ್ ।
ರಮಾಬ್ರಹ್ಮಾದಿಗಂ ದೇಶಕಾಲವರ್ಣಾಂಡಪೂರ್ವಕಮ್ ॥ – ಸತ್ತತ್ತ್ವರತ್ನಮಾಲಾ (೩೨೫)

- ಸೇವಕ ಎಂಬುದಕ್ಕೆ ಸೇವಕಾರ್ಥ್ಯನುಜೀವಿನಃ । - ಇತ್ಯಮರಃ. ಎಂದು ಅರ್ಥ. ಅನುಜೀವಿ ಎಂದರೆ, ಅನುಚರ. ಇದು ಮುಖ್ಯವಾಗಿ ಬಿಂಬವನ್ನು ಸರ್ವಾತ್ಮನಾ ಅವಲಂಬಿಸಿರುವ ಪ್ರತಿಬಿಂಬ ಎಂಬ ಅರ್ಥವನ್ನು ಕೊಡುವುದು; ಆದ್ದರಿಂದ ರಮಾಬ್ರಹ್ಮಾದಿ ಸಮಸ್ತರೂ ಸಹ ಶ್ರೀಹರಿಯ ಪ್ರತಿಬಿಂಬ, ಅವನೊಬ್ಬನೆ ಸರ್ವರಿಗೂ ಬಿಂಬ ಎಂಬ ವಿಶೇಷಾರ್ಥವು ಧ್ವನಿಸುವುದು.

೧೧. 'ಪ್ರಭೋಃ'[೧] ಎಂದು ಶ್ರೀಹರಿಯನ್ನು ಕರೆದಿರುವುದು ಅವನು ಸರ್ವ ಜಗತ್ತಿಗೂ ಸಹ ಸ್ವಾಮಿ ಎಂದು ತಿಳಿಸಲು ಎಂದು ತಿಳಿಯಬೇಕು. ಸರ್ವತಂತ್ರಸ್ವತಂತ್ರನಾದ ಶ್ರೀಹರಿ ಇತರ ಎಲ್ಲರಿಗಿಂತಲೂ ಸಹ ಅನಂತಪಟ್ಟು ಮಿಗಿಲಾದ ಹಿರಿಮೆಯನ್ನು ಹೊಂದಿದ ಪರದೇವತೆ. ಆದ್ದರಿಂದಲೇ ಇತರ ಎಲ್ಲರಿಗೂ ಸಹ ಅವನು ಸ್ವಾಮಿಯಾಗಿದ್ದು ಇತರ ಎಲ್ಲರೂ ಸಹ ಅನಾದಿಕಾಲದಿಂದ ಅನಂತಕಾಲದವರೆಗೂ ಅವನ ಸೇವಕರೇ ಆಗಿರುವರು ಎಂಬ ವಿಶೇಷಾಂಶ ತಿಳಿಯುವುದು. ಸೇವಕರು ಎಂದರೆ ದಾಸರು; ಶ್ರೀಹರಿಯು ಈಶನಾದರೆ, ಉಳಿದವರು ದಾಸರು. ಈ ಮಾತು ಹನುಮಂತ ನುಡಿದ 'ದಾಸೋಽಹಂ ಕೋಸಲೇಂದ್ರಸ್ಯ' ಎಂಬ ಮಾತನ್ನು ಜ್ಞಾಪಿಸುವಂತಿದೆ. ಜೀವರು ಈಶ್ವರನಿಂದ ಭಿನ್ನರು ಮಾತ್ರವಲ್ಲದೆ, ಅವನಿಗಿಂತ ಅನಂತಾಂಶ ನ್ಯೂನರಾದ್ದರಿಂದ ಸದಾ ಅವನ ದಾಸರೇ ಆಗಿರುವರು ಎಂಬ ಅಭಿಪ್ರಾಯ ಇದರಿಂದ ಸೂಚಿತವಾಗುವುದು. ಇಲ್ಲಿಯ ದಾಸ್ಯವು ಸಹ ರಾಜಭೃತ್ಯಭಾವದ ದಾಸ್ಯವಾಗಿರದೆ, ಬಿಂಬಪ್ರತಿಬಿಂಬ ಭಾವರೂಪದ, ಸರ್ವಾತ್ಮನಾ ಅಧೀನವಾದ ದಾಸ್ಯವಾಗಿದೆ. ಇದು 'ಸ್ವರೂಪ ಪ್ರಮಿತಿಪ್ರವೃತ್ತಿರೂಪಸತ್ತಾತ್ರೈವಿಧ್ಯೇ ಪರಾನಪೇಕ್ಷಂ ಸ್ವತಂತ್ರಂ ತದಪೇಕ್ಷಮ್ ಅಸ್ವತಂತ್ರಮ್' ಎಂಬ ತತ್ತ್ವಸಂಖ್ಯಾನ ಟೀಕೆಯ ವಿವರಣೆಯಂತಿದೆ ಎಂದು ತಿಳಿಯಬೇಕು. ಪ್ರತಿಬಿಂಬವು ಬಿಂಬದ ಮೇಲೆ ಸರ್ವಾತ್ಮನಾ ಅವಲಂಬಿತವಾಗಿರುವುದು ಮತ್ತು ಅದರೊಂದಿಗೆ ಸ್ವಲ್ಪ ಮಾತ್ರವೇ ಸಾಮ್ಯವನ್ನು ಹೊಂದಿರುವುದು. ಅದರಂತೆ ರಮಾಬ್ರಹ್ಮಾದಿ ಸಕಲರೂ ಶ್ರೀಹರಿಯನ್ನು ಸರ್ವಾತ್ಮನಾ ಅವಲಂಬಿಸಿರುವರು ಮತ್ತು ಅವನೊಂದಿಗೆ ಕಿಂಚಿತ್ಸಾದೃಶ್ಯವನ್ನು ಹೊಂದಿರುವರು. ಎಂದರೆ ಜೀವಬ್ರಹ್ಮೈಕ್ಯವಾಗಲಿ, ಮುಕ್ತರಿಗೆ ಪರಬ್ರಹ್ಮನೊಂದಿಗೆ ಸಾಮ್ಯವಾಗಲಿ ಸರ್ವಥಾ ಅಶಕ್ಯ ಎಂದು ಭಾವ. ಪ್ರತಿಬಿಂಬವು ಎಂದೂ ಬಿಂಬದೊಂದಿಗೆ ಐಕ್ಯವನ್ನು ಹೊಂದಿಲ್ಲ ಮತ್ತು ಪರಿಪೂರ್ಣವಾದ ಸಾಮ್ಯವನ್ನೂ ಹೊಂದಿಲ್ಲ ಎಂಬ ತತ್ತ್ವವನ್ನು ಬಲ್ಲವರಿಗೆ ಇದರಲ್ಲಿಯ ಸ್ವಾರಸ್ಯ ಮನವರಿಕೆಯಾಗುವುದು.

೧೨. **'ತ್ರೈಲೋಕ್ಯಕುಟುಂಬಪಾಲನಪರಃ'** - ಮೂರು ಲೋಕವೇ ಭಗವಂತನ ಕುಟುಂಬ; ಅದರ ಪಾಲನೆಯೊಂದೆ ಭಗವಂತನ ಮುಖ್ಯ ಕಾರ್ಯ ಎಂದರ್ಥ. ಮೂರು

---

೧. ಸ್ವಾಮೀ ತ್ವೀಶ್ವರಃ ಪತಿರೀಶಿತಾ । ಅಧಿಭೂರ್ನಾಯಕೋ ನೇತಾ ಪ್ರಭುಃ ಪರಿವೃಢೋಽಧಿಪಃ ।
- ಇತ್ಯಮರಃ ।

ಲೋಕಗಳು ಎಂದರೆ, ಭೂಃ, ಭುವಃ ಸ್ವಃ ಅಥವಾ ಸ್ವರ್ಗ, ಮರ್ತ್ಯ, ಪಾತಾಳ ಅಥವಾ ಭೂಮಿ, ಕೆಳಗಿನ ಲೋಕಗಳು ಹಾಗೂ ಮೇಲಿನ ಲೋಕಗಳು ಎಂದು ಅರ್ಥ. ಈ ಮೂರು ಲೋಕಗಳಿಗೂ ಶ್ರೀಹರಿಯೇ ಸರ್ವಸ್ವಾಮಿ. ಅವನು ಸದಾ ಈ ಲೋಕಗಳನ್ನು ಎಲ್ಲ ರೀತಿಯಲ್ಲೂ ಪಾಲಿಸುವನು ಮತ್ತು ಅವನಿಗೆ ಯಾವ ಕಾರ್ಯವೂ ಸಹ ಸ್ವಂತ ಪ್ರಯೋಜನಕ್ಕಾಗಿ ಇರದೆ ಕೇವಲ ಲೋಕರಕ್ಷಣೆಗಾಗಿ ಮಾತ್ರವೇ ಇರುವುದು ಎಂದರ್ಥ. ಇದು 'ನ ಪ್ರಯೋಜನವತ್ವಾತ್' ಎಂಬ ಬ್ರಹ್ಮಸೂತ್ರದ ಭಾವವೂ ಆಗಿದೆ. ದ್ವಾದಶ ಸ್ತೋತ್ರದ 'ಜಗದ್ರಕ್ಷಾಕೇವಲೋದ್ಯೋಗಿನೋಽನಿಶಮ್, ಅಸ್ಮದಿಷ್ಟೈಕಕಾರ್ಯಾಯ' ಎಂಬ ಮಾತುಗಳ ಭಾವವು ಇದಾಗಿದೆ. ಶ್ರೀಜಯತೀರ್ಥರ ಈ ಕೆಳಗಿನ [೧]ಶ್ಲೋಕವನ್ನು ಈ ಸಂದರ್ಭದಲ್ಲಿ ಗಮನಿಸಬಹುದು:

ಕಲತ್ರಂ ಕಮಲಾ ಯಸ್ಯ ಪುತ್ರಃ ಕಮಲಸಂಭವಃ।
ಶಿವಾದ್ಯಾಃ ಸೇವಕಾಸ್ತಸ್ಮೈ ನಮೋ ವಿಶ್ವಕುಟುಂಬಿನೇ॥
– ವಿಷ್ಣುತತ್ತ್ವವಿನಿರ್ಣಯಟೀಕಾ

೧೨. ಶ್ರೀರಾಜರಾಜೇಶ್ವರರ 'ಶ್ರೀರಾಮಸಂದೇಶ'[೨] ಕೃತಿಯಲ್ಲಿ ಬಂದಿರುವ ಈ ಕೆಳಗಿನ ಶ್ಲೋಕವು ಇದೇ ತೆರನಾಗಿರುವುದು ಗಮನಾರ್ಹ :

ಲಕ್ಷ್ಮೀರ್ಜಾಯಾ ಸುರವರಗುರುಃ ಪದ್ಮಭೂರ್ಯಸ್ಯ ಸೂನುಃ
ಶೇಷಃ ಶಯ್ಯಾ ತ್ರಿಪುರದಹನೋ ಯಸ್ಯ ಪೌತ್ರೋ ಗರುತ್ಮಾನ್।
ವಾಹಶ್ಚಾಂಡಂ ಸದನಮುದಧಿರ್ಯತ್ಪದಕ್ಷಾಲನಾರ್ಥ-
ಶ್ಚಿತ್ರಂ ಚಿತ್ರಂ ಜಗತಿ ಮಹತಸ್ತಸ್ಯ ಪುಂಸಶ್ಚರಿತ್ರಮ್ (೧/೩೫)

– ಇದು ಒಂದು ರೀತಿಯಲ್ಲಿ ಮಂಗಲಾಷ್ಟಕವು ಅವರ ರಚನೆ ಎಂಬುದಕ್ಕೆ ಪುರಾವೆಯಂತೆಯೂ ಇರುವ ಶ್ಲೋಕ ಎಂದು ತಿಳಿಯಬಹುದು.

---

೧. ಶ್ರೀಕನಕದಾಸರ 'ಹರಿಭಕ್ತಿಸಾರ' ಕೃತಿಯ ಈ ಕೆಳಗಿನ ಪದ್ಯವು ಇದರ ಅನುವಾದದಂತಿದೆ:
ಸಿರಿಯು ಕುಲಸತಿ ಸುತನು ಕಮಲಜ। ಹಿರಿಯಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು।
ನಿರುತ ಮಾಯೆಯು ದಾಸಿ ನಿಜಮಂದಿರವಜಾಂಡವು ಜಂಗಮಸ್ಥಾ-
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ॥ – (೨೫)

೨. ಶ್ರೀವಾದಿರಾಜಸ್ವಾಮಿಗಳ ರುಗ್ಮಿಣೀಶವಿಜಯದ ಈ ಕೆಳಗಿನ ಶ್ಲೋಕವು ಇದೇ ತೆರನಾಗಿದೆ:
ಶಂಭುಃ ಪುತ್ರಸಮಃ ಸ ಮೇ ಪುರರಿಪುಃ ಪೌತ್ರಃ ಶಶೀ ಸೋದರಃ
ಸಿಂಧುರ್ಮೇ ಜನಕಾಯಿತೋ ಮಧುಸಖೋ ಮತ್ಸೂನುಕಲ್ಪಃ ಪ್ರಭೋ।
ಅಂಬಾಽಹಂ ಸಕಲಸ್ಯ ಚೇತಿ ಕಮಲಾ ಕೃಷ್ಣೈಕಲಗ್ನಂ ಮನೋ-
ಭೃಂಗಂ ದರ್ಶಯಿತುಂ ಕೃತೋಗ್ರಶಪಥಾ ಸ್ವಂ ರೂಪಮಸ್ಪಷ್ಟಯತ್ ॥ – (೧೪/೪೩)

೧೪. '**ಹರಿಃ**' ಎಂದರೆ ಭಗವಂತನಾದ ನಾರಾಯಣ ಎಂದರ್ಥ. 'ಹರತೀತಿ ಹರಿಃ' ಭಕ್ತರ ಸಂಸಾರವನ್ನು ಪರಿಹರಿಸುವುದರಿಂದ ಅವನಿಗೆ ಹರಿ ಎಂದು ಹೆಸರು. ಶ್ರೀವಿಷ್ಣುಸಹಸ್ರನಾಮದಲ್ಲಿ ಹರಿಃ ಎಂಬ ನಾಮವು ಬಂದಿದೆ. ಆದ್ದರಿಂದ ಇದು ಒಂದು ಅವನ ರೂಪವು ಸಹ ಆಗಿದೆ ಎಂದು ತಿಳಿಯುವುದು. ಬಿಂಬರೂಪಿಯಾದ ಭಗವಂತನನ್ನು ಹರಿ ಎಂಬ ಪದ ಸೂಚಿಸುವುದು ಎಂಬ ವಿಶೇಷಾರ್ಥವು ಇದರಿಂದ ಸೂಚಿತ. ಬಿಂಬರೂಪಿಯಾದ ಶ್ರೀಹರಿಯು ನಮಗೆ ಮಂಗಳವನ್ನೀಯಲಿ ಎಂದು ಭಾವ.

೧೫. '**ಮಂಗಲ**' ಎಂದರೆ ಒಳಿತು; ಒಳಿತು ಎಂದರೆ ಶ್ರೇಯಸ್ಸು, ಪಾರಲೌಕಿಕವಾದ ಹಿತವನ್ನು ಶ್ರೇಯಸ್ಸು ಎಂದು ಕರೆಯುವರು. ಪ್ರೇಯಸ್ಸು ಎಂಬುದು ಭೌತಿಕ ಸುಖವಾದರೆ, ಶ್ರೇಯಸ್ಸು ಆಧ್ಯಾತ್ಮಿಕ ಸುಖ. ಪ್ರೇಯಸ್ಸು ರುಚಿಕರವಾದರೆ, ಶ್ರೇಯಸ್ಸು ಹಿತಕರ; ಪ್ರೇಯಸ್ಸು ಐಹಿಕವಾದರೆ, ಶ್ರೇಯಸ್ಸು ಪಾರತ್ರಿಕ; ಪ್ರೇಯಸ್ಸು ನಶ್ವರವಾದರೆ, ಶ್ರೇಯಸ್ಸು ಶಾಶ್ವತ; ಇಲ್ಲಿ ಮುಖ್ಯವಾಗಿ ಮಂಗಲ ಶಬ್ದಕ್ಕೆ ಶ್ರೇಯಸ್ಸು ಎಂದೇ ಅರ್ಥ. ಪ್ರೇಯಸ್ಸು ಎಂಬುದು ಉಪಲಕ್ಷಿತ ಎಂದು ತಿಳಿಯಬೇಕು; **ಮಂಗಲಂ** – ಒಳಿತು:

ಶ್ವಃಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಲಂ ಶುಭಮ್ ।
ಭಾವುಕಂ ಭಾವಿಕಂ ಭವ್ಯಂ ಕುಶಲಂ ಕ್ಷೇಮಮಸ್ತ್ರಿಯಾಮ್ ॥ (ಅಮರಕೋಶ)

– ಇಲ್ಲಿ ಮುಖ್ಯವಾಗಿ ಒಳಿತು ಎಂದರೆ, ಜ್ಞಾನಭಕ್ತ್ಯಾದಿ ಸಾಧನಗಳು ಹಾಗು ಮೋಕ್ಷ ಎಂಬ ಫಲ ಎಂದೇ ಅರ್ಥ.

೧೬. '**ಕುರ್ಯಾತ್**' ಎಂದರೆ ಮಾಡಲಿ, ಅನುಗ್ರಹಿಸಲಿ ಎಂದರ್ಥ. ಇದಕ್ಕೆ ಮಾಡಲಿ ಎಂದು, ತತ್ತ್ವಾಭಿಮಾನಿ ದೇವತೆಗಳ ಮೂಲಕ ಮಾಡಿಸಲಿ ಎಂದು ಅರ್ಥ. ಅದರಂತೆ ಯಥಾಶಕ್ತಿ ನಮ್ಮಿಂದಲೂ ಸಹ ಇತರರಿಗೆ ಒಳಿತಾಗುವ ಕಾರ್ಯಗಳನ್ನು ಮಾಡಿಸಲಿ ಎಂಬ ಭಾವವೂ ವಿವಕ್ಷಿತ.

೧೭. ಮಹಾಲಕ್ಷ್ಮಿಯು ಅಕ್ಷರಪುರುಷಳು; ಬ್ರಹ್ಮಾದಿ ಇತರ ಸಕಲರು ಕ್ಷರಪುರುಷರು ಎಂಬುದಾಗಿ ಭಗವದ್ಗೀತೆ ತಿಳಿಸಿದೆ: '[1]ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ' (ಭಗವದ್ಗೀತೆ ೧೫/೧೬).ಶ್ರೀಹರಿಯು ಲಕ್ಷ್ಮೀಪತಿ ಎಂಬ ಮಾತಿನಲ್ಲಿ ಅವನು ಅಕ್ಷರಪುರುಷೋತ್ತಮ ಎಂದು, ಬ್ರಹ್ಮರುದ್ರಾದಿಗಳು ಅವನ ಪುತ್ರಾದಿರೂಪ ಪರಿವಾರ ಎಂಬ ಮಾತಿನಲ್ಲಿ ಅವನು ಕ್ಷರಪುರುಷೋತ್ತಮ ಎಂದು ವರ್ಣಿತವಾಗಿ, ಅವನು ಒಟ್ಟಾಗಿ ಕ್ಷರಾಕ್ಷರಪುರುಷೋತ್ತಮನಾದ ಪರಮಪುರುಷ ಎಂಬ ವಿಶೇಷ ಪ್ರಮೇಯ ಸೂಚಿತವಾಗುವುದು.

*****

---

೧. ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ।
ಲಕ್ಷ್ಮೀರಕ್ಷರದೇಹತ್ವಾದಕ್ಷರಾ ತತ್ಪರೋ ಹರಿಃ॥ – ವಿಷ್ಣುತತ್ತ್ವವಿನಿರ್ಣಯ (೨/೧)

- ೨ -

## ಬ್ರಹ್ಮಾದಿ ಸುರಶ್ರೇಷ್ಠರು

**ಬ್ರಹ್ಮಾ ವಾಯುಗಿರೀಶಶೇಷಗರುಡಾ ದೇವೇಂದ್ರಕಾಮೌ ಗುರು-**
**ಶ್ಚಂದ್ರಾರ್ಕೌ ವರುಣಾನಲೌ ಮನುಯಮೌ ವಿತ್ತೇಶವಿಘ್ನೇಶ್ವರೌ ।**
**ನಾಸತ್ಯೌ ನಿರ್ಋತಿರ್ಮರುದ್ಗಣಯುತಾಃ ಪರ್ಜನ್ಯಮಿತ್ರಾದಯಃ**
**ಸಸ್ತ್ರೀಕಾಃ[1] ಸುರಪುಂಗವಾಃ[2] ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥**

ಪದಚ್ಛೇದ: ಬ್ರಹ್ಮಾ, ವಾಯುಗಿರೀಶಶೇಷಗರುಡಾಃ, ದೇವೇಂದ್ರಕಾಮೌ, ಗುರುಃ, ಚಂದ್ರಾರ್ಕೌ, ವರುಣಾನಲೌ, ಮನುಯಮೌ, ವಿತ್ತೇಶವಿಘ್ನೇಶ್ವರೌ, ನಾಸತ್ಯೌ, ನಿರ್ಋತಿಃ, ಮರುದ್ಗಣಯುತಾಃ, ಪರ್ಜನ್ಯಮಿತ್ರಾದಯಃ, ಸಸ್ತ್ರೀಕಾಃ, ಸುರಪುಂಗವಾಃ, ಪ್ರತಿದಿನಂ, ಕುರ್ವಂತು, ನಃ, ಮಂಗಲಮ್.

**ಅನು: ಬ್ರಹ್ಮದೇವರು, ವಾಯುದೇವರು, ರುದ್ರದೇವರು, ಶೇಷದೇವರು, ಗರುಡದೇವರು, ದೇವೇಂದ್ರ ಹಾಗೂ ಕಾಮ, ಬೃಹಸ್ಪತ್ಯಾಚಾರ್ಯರು, ಚಂದ್ರಸೂರ್ಯರು, ವರುಣ ಹಾಗೂ ಅಗ್ನಿ, ಮನು ಹಾಗೂ ಯಮ, ಕುಬೇರ ಹಾಗೂ ಗಣೇಶ, ಅಶ್ವಿನಿದೇವತೆಗಳು, ನಿರ್ಋತಿ, ಮರುದ್ಗಣಗಳು, ಪರ್ಜನ್ಯ ಹಾಗೂ ಮಿತ್ರನಾಮಕ ಸೂರ್ಯ ಮೊದಲಾದ[3] ಸಕಲ**

---

೧. ದೇವಸ್ತ್ರೀಯರ ಬಳಿಕ ಅಪ್ಸರೆಯರು ಸಹ ಸ್ಮರಣೀಯರಾಗಿರುವರು:
ದೇವಕನ್ಯಾ ಮಹಾಭಾಗಾ ದಿವ್ಯಾಶ್ಚಾಪ್ಸರಸಾಂ ಗಣಾಃ ॥
ಉರ್ವಶೀ ಮೇನಕಾ ರಂಭಾ ಮಿಶ್ರಕೇಶೀ ಹ್ಯಲಂಬುಷಾ ।
ವಿಶ್ವಾಚೀ ಚ ಘೃತಾಚೀ ಚ ಪಂಚಚೂಡಾ ತಿಲೋತ್ತಮಾ ॥
ಆದಿತ್ಯಾ ವಸವೋ ರುದ್ರಾಃ ಸಾಶ್ವಿನಃ ಪಿತರೋಽಪಿ ಚ ।
ಧರ್ಮಃ ಶ್ರುತಂ ತಪೋ ದೀಕ್ಷಾ ವ್ಯವಸಾಯಃ ಪಿತಾಮಹಃ ॥- ಮಹಾಭಾರತ (ಅ.ಪ/೧೬೫/೧೪-೧೬)

೨. ಮಹಾಭಾರತದಲ್ಲಿ ಬಂದಿರುವ ದೇವತೆಗಳ ವಿವರ ಹೀಗಿದೆ:
ದೇವಾಸುರಗುರುರ್ದೇವಃ ಸರ್ವಭೂತನಮಸ್ಕೃತಃ ।
ಅಚಿಂತ್ಯೋಽಥಾಪ್ಯನಿರ್ದೇಶ್ಯಃ ಸರ್ವಪ್ರಾಣೋ ಹ್ಯಯೋನಿಜಃ ॥
ಪಿತಾಮಹೋ ಜಗನ್ನಾಥಃ ಸಾವಿತ್ರೀ ಬ್ರಹ್ಮಣಃ ಸತೀ ।
ವೇದಭೂರಥ ಕರ್ತಾ ಚ ವಿಷ್ಣುರ್ನಾರಾಯಣಃ ಪ್ರಭುಃ ॥
ಉಮಾಪತಿರ್ವಿರೂಪಾಕ್ಷಃ ಸ್ಕಂದಃ ಸೇನಾಪತಿಸ್ತಥಾ ।
ವಿಶಾಖೋ ಹುತಭುಗ್ವಾಯುಶ್ಚಂದ್ರಸೂರ್ಯೌ ಪ್ರಭಾಕರೌ ॥
ಶಕ್ರಃ ಶಚೀಪತಿರ್ದೇವೋ ಯಮೋ ಧೂಮೋರ್ಣಯಾ ಸಹ ।
ವರುಣಃ ಸಹ ಗೌರ್ಯಾ ಚ ಸಹ ಋದ್ಧ್ಯಾ ಧನೇಶ್ವರಃ ॥ – ಮಹಾಭಾರತ (ಅ.ಪ/೧೬೫/೮-೧೧)

೩. ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚಾಪರಾಜಿತಃ ।
ಋತಶ್ಚ ಪಿತ್ರರೂಪಶ್ಚ ತ್ರ್ಯಂಬಕಶ್ಚ ಮಹೇಶ್ವರಃ ॥

**ಸುರಶ್ರೇಷ್ಠರು ತಮ್ಮ ಪತ್ನೀ ಸಮೇತರಾಗಿ ನಮಗೆ ಪ್ರತಿದಿನವು ಮಂಗಳವನ್ನು ಉಂಟುಮಾಡಲಿ.**

---

ವೃಷಾಕಪಿಶ್ಚ ಶಂಭುಶ್ಚ ಹವನೋऽಥೇಶ್ವರಸ್ತಥಾ।
ಏಕಾದಶೈತೇ ಪ್ರಥಿತಾ ರುದ್ರಾಸ್ತ್ರಿಭುನೇಶ್ವರಾಃ॥
ಶತಮೇತತ್ ಸಮಾಮ್ನಾತಂ ಶತರುದ್ರೇ ಮಹಾತ್ಮನಾಮ್। - ಮಹಾಭಾರತ (ಅ.ಪ/೧೫೦/೧೨-೧೪)
ಅಂಶೋ ಭಗಶ್ಚ ಮಿತ್ರಶ್ಚ ವರುಣಶ್ಚ ಜಲೇಶ್ವರಃ॥
ತಥಾ ಧಾತಾऽರ್ಯಮಾ ಚೈವ ಜಯಂತೋ ಭಾಸ್ಕರಸ್ತಥಾ।
ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ॥
ಇತ್ಯೇತೇ ದ್ವಾದಶಾದಿತ್ಯಾಃ ಕಾಶ್ಯಪೇಯಾ ಇತಿ ಶ್ರುತಿಃ। - ಮಹಾಭಾರತ (ಅ.ಪ/೧೫೦/೧೪,೧೫)
ಧರೋ ಧ್ರುವಶ್ಚ ಸೋಮಶ್ಚ ಸಾವಿತ್ರೋऽಥಾನಿಲೋऽನಲಃ॥
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋऽಷ್ಟೌ ಪ್ರಕೀರ್ತಿತಾಃ।
ನಾಸತ್ಯಶ್ಚಾಪಿ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಪಿ॥
ಮಾರ್ತಂಡಸ್ಯಾತ್ಮಜಾವೇತೌ ಸಂಜ್ಞಾನಾಸಾವಿನಿರ್ಗತೌ।
ಅತಃ ಪರಂ ಪ್ರವಕ್ಷ್ಯಾಮಿ ಲೋಕಾನಾಂ ಕರ್ಮಸಾಕ್ಷಿಣಃ॥
ಅಪಿ ಯಜ್ಞಸ್ಯ ವೇತ್ತಾರೋ ದತ್ತಸ್ಯ ಸುಕೃತಸ್ಯ ಚ।
ಅದೃಶ್ಯಾಃ ಸರ್ವಭೂತೇಷು ಪಶ್ಯಂತಿ ತ್ರಿದಶೇಶ್ವರಾಃ॥
ಶುಭಾಶುಭಾನಿ ಕರ್ಮಾಣಿ ಮೃತ್ಯುಃ ಕಾಲಶ್ಚ ಸರ್ವಶಃ।
ವಿಶ್ವೇದೇವಾಃ ಪಿತೃಗಣಾ ಮೂರ್ತಿಮಂತಸ್ತಪೋಧನಾಃ॥
ಮುನಯಶ್ಚೈವ ಸಿದ್ಧಾಶ್ಚ ತಪೋಮೋಕ್ಷಪರಾಯಣಾಃ।
ಶುಚಿಸ್ಮಿತಾಃ ಕೀರ್ತಯತಾಂ ಪ್ರಯಚ್ಛಂತಿ ಶುಭಂ ನೃಣಾಮ್॥
ಪ್ರಜಾಪತಿಕೃತಾನೇತಾನ್ ಲೋಕಾನ್ ದಿವ್ಯೇನ ತೇಜಸಾ।
ವಸಂತಿ ಸರ್ವಲೋಕೇಷು ಪ್ರಯತಾಃ ಸರ್ವಕರ್ಮಸು॥
ಪ್ರಾಣಾನಾಮೀಶ್ವರಾನೇತಾನ್ ಕೀರ್ತಯನ್ ಪ್ರಯತೋ ನರಃ।
ಧರ್ಮಾರ್ಥಕಾಮೈರ್ವಿಪುಲೈರ್ಯುಜ್ಯತೇ ಸಹ ನಿತ್ಯಶಃ॥
ಲೋಕಾಂಶ್ಚ ಲಭತೇ ಪುಣ್ಯಾನ್ ವಿಶ್ವೇಶ್ವರಕೃತಾನ್ ಶುಭಾನ್।
ಏತೇ ದೇವಾಸ್ತ್ರಯಸ್ತ್ರಿಂಶತ್ ಸರ್ವಭೂತಗಣೇಶ್ವರಾಃ॥
ನಂದೀಶ್ವರೋ ಮಹಾಕಾಯೋ ಗ್ರಾಮಣೀರ್ವೃಷಭಧ್ವಜಃ।
ಈಶ್ವರಾಃ ಸರ್ವಲೋಕಾನಾಂ ಗಣೇಶ್ವರವಿನಾಯಕಾಃ॥
ಸೌಮ್ಯಾ ರೌದ್ರಾ ಗಣಾಶ್ಚೈವ ಯೋಗಭೂತಗಣಾಸ್ತಥಾ।
ಜ್ಯೋತೀಂಷಿ ಸರಿತೋ ವ್ಯೋಮ ಸುಪರ್ಣಃ ಪತಗೇಶ್ವರಃ॥
ಪೃಥಿವ್ಯಾಂ ತಪಸಾ ಸಿದ್ಧಾಃ ಸ್ಥಾವರಾಶ್ಚ ಚರಾಶ್ಚ ಹ।
ಹಿಮವಾನ್ ಗಿರಯಃ ಸರ್ವೇ ಚತ್ವಾರಶ್ಚ ಮಹಾರ್ಣವಾಃ॥
ಭವಸ್ಯಾನುಚರಾಶ್ಚೈವ ಹರತುಲ್ಯಪರಾಕ್ರಮಾಃ।
ವಿಷ್ಣುರ್ದೇವೋऽಥ ಜಿಷ್ಣುಶ್ಚ ಸ್ಕಂದಶ್ಚಾಂಬಿಕಯಾ ಸಹ॥
ಕೀರ್ತಯನ್ ಪ್ರಯತಃ ಸರ್ವಾನ್ ಸರ್ವಪಾಪೈಃ ಪ್ರಮುಚ್ಯತೇ।

- ಮಹಾಭಾರತ (ಅ.ಪ/೧೫೦/೧೬-೨೮)

ವಿ. ೧ : ಮೊದಲ ಶ್ಲೋಕದಲ್ಲಿ ಸರ್ವೋತ್ತಮನಾದ, ಲಕ್ಷ್ಮೀಪತಿಯಾದ ಶ್ರೀಹರಿಯು ಮಂಗಲವನ್ನು ನೀಡಲಿ ಎಂದು ಪ್ರಾರ್ಥಿಸಿ, ಈ ಶ್ಲೋಕದಲ್ಲಿ ಬ್ರಹ್ಮಾದಿ ಸಕಲ ದೇವತೆಗಳು ಸಹ ಸಪತ್ನೀಕರಾಗಿ ಮಂಗಲವನ್ನು ನೀಡಲಿ ಎಂದು ಪ್ರಾರ್ಥಿಸಿರುವರು.

೨. ಬ್ರಹ್ಮ ಹಾಗೂ ವಾಯು ಇಬ್ಬರೂ ಸಹ ಜೀವೋತ್ತಮರು. ವಾಯುದೇವರು, ಬ್ರಹ್ಮದೇವರ ಪದವಿಗೆ ಬರುವುದರಿಂದ ಅವರಿಬ್ಬರೂ ಸಮರು. ಅವರ ಅನುಗ್ರಹವಿಲ್ಲದೆ ಮುಕ್ತಿ ಪಡೆಯಲು ಸಾಧ್ಯವೇ ಇಲ್ಲ. ಶ್ರೀಹರಿಯು ಮುಕ್ತಿ ನೀಡುವ ಪರದೇವತೆಯಾದರೆ, ಬ್ರಹ್ಮವಾಯುಗಳು ಅವನನ್ನು ಪ್ರಾರ್ಥಿಸಿ ಮುಕ್ತಿಯನ್ನು ನೀಡಿಸುವ ವಿಶ್ವಗುರುಗಳು. ಸರಸ್ವತಿ ಬ್ರಹ್ಮಪತ್ನಿ, ಭಾರತೀ ವಾಯುಪತ್ನಿ.

೩. ಬ್ರಹ್ಮ ಎಂಬುದಕ್ಕೆ ಗುಣಪೂರ್ಣ ಎಂದರ್ಥ (ಬೃಹಂತೋಹಿ ಅಸ್ಮಿನ್ ಗುಣಃ). ಶ್ರೀಹರಿಯು ವೇದಾದಿಗಳಿಗೂ ನಿಲುಕದ ಸರ್ವೋತ್ತಮತ್ವ ಪ್ರತಿಪಾದಕವಾದ ಗುಣಗಣಗಳಿಂದ ಪೂರಿತನಾದವನು. ಬ್ರಹ್ಮ ಮೊದಲಾದ ಋಜುಗಳು ಜಗತ್ಪ್ರಸಿದ್ಧವಾದ ಗುಣಗಳಿಂದ ಕೂಡಿದವರು (ಯೇ ಯೇ ಗುಣಾ ನಾಮ ಜಗತ್ಪ್ರಸಿದ್ಧಾ ಯಂ ತೇಷು ತೇಷುಸ್ಮ ನಿದರ್ಶಯಂತಿ - ಸುಮಧ್ವವಿಜಯ ೧/೧೦). ಅಲ್ಲದೆ ಅವರು ಶ್ರೀಹರಿಯ ಸಾಕ್ಷಾತ್ ಪ್ರತಿಬಿಂಬ. ಈ ಕಾರಣದಿಂದ ಬ್ರಹ್ಮ ಎಂಬ ವಿಷ್ಣುವಿಗೆ ಅನ್ವಯಿಸುವ ಪದವನ್ನು ಇವರಿಗೂ ಅನ್ವಯಿಸಲು ಕಾರಣವಾಗಿದೆ ಎಂದು ತಿಳಿಯಬೇಕು. ಬ್ರಹ್ಮದೇವರು ಶ್ರೀಹರಿಯ ಆದೇಶದಂತೆ ಸೃಷ್ಟಿಕಾರ್ಯವನ್ನು ಮಾಡುವವರು. ರುದ್ರಾದಿ ಇತರ ಸಕಲದೇವತೆಗಳಿಗೂ ಸಹ ಜನಕರೆನ್ನಿಸಿದವರು. ಋಜುಗಣದಲ್ಲಿ ಪ್ರಧಾನರು. ಜಗದ್ಗುರುಗಳು ಎಂಬ ವಿಶೇಷವಾದ ಹಿರಿಮೆಯನ್ನು ಹೊಂದಿದವರು. ಲಕ್ಷ್ಮೀನಾರಾಯಣರ ಮಾಯಾ ಹಾಗೂ ವಾಸುದೇವ-ರೂಪದ ಪುತ್ರರು; ಪುರುಷ ಎಂಬುದು ಇವರಲ್ಲಿ ಸ್ವತಃ ಬ್ರಹ್ಮ ಎಂಬ ತನ್ನ ರೂಪವನ್ನು ಇರಿಸಿ ಭಗವಂತನಾದ ಶ್ರೀಹರಿ ಅವರಿಗೆ ವಿಹಿತವಾದ ಕಾರ್ಯಗಳನ್ನು ಮಾಡಿಸುವನು.

೪. ವಾಯುದೇವರು ಸಂಕರ್ಷಣ ಹಾಗೂ ಜಯ ಎಂಬ ನಾರಾಯಣ ಹಾಗೂ ಮಹಾಲಕ್ಷ್ಮಿಯ ಪುತ್ರರು. ಸೂತ್ರ ಎಂಬುದು ಅವರ ಹೆಸರು. ಇವರು ಭಾರತೀದೇವಿಯಲ್ಲಿ ಗರುಡ, ಶೇಷ, ರುದ್ರ ಹಾಗೂ ಇಂದ್ರರನ್ನು ಪುತ್ರರನ್ನಾಗಿ ಪಡೆದವರು. ಪ್ರತಿದಿನ ಸಕಲ ಜೀವಿಗಳ ದೇಹದಲ್ಲಿ ನೆಲೆಸಿದ್ದು ದಿನಕ್ಕೆ ೨೧೬೦೦ ಶ್ವಾಸಜಪವನ್ನು ಮಾಡಿ ರಕ್ಷಿಸುವ ಮಹನೀಯರು. ಕೂರ್ಮರೂಪದಿಂದ ಶೇಷನನ್ನು ಧರಿಸಿದವರು. ಇತರ ಸಕಲ ತತ್ತ್ವಾಭಿಮಾನಿಗಳಿಗೂ ಪ್ರೇರಕರಾಗಿರುವವರು.

೫. ಬ್ರಹ್ಮದೇವರಿಗೂ ಸರಸ್ವತಿ ದೇವಿಗೂ ಅವತಾರವಿಲ್ಲ. ವಾಯುದೇವರಿಗೆ ಹನುಮಂತ ಭೀಮಸೇನ ಮತ್ತು ಮಧ್ವಾಚಾರ್ಯರು ಎಂಬುದಾಗಿ ಮೂರು ಅವತಾರಗಳು. ಭಾರತೀ ದೇವಿಯು ಪಾರ್ವತಿ ಮೊದಲಾದ ದೇವತಾ ಸ್ತ್ರೀಯರಿಂದ

ಪ್ರಾರ್ಥಿತರಾಗಿ ಶಿವಕನ್ಯೆ, ಇಂದ್ರಸೇನೆ, ದ್ರೌಪದೀ ಹಾಗೂ ಚಂದ್ರಾ ಎಂಬುದಾಗಿ ನಾಲ್ಕು ಅವತಾರಗಳನ್ನು ಮಾಡಿರುವರು.

೬. ಗರುಡ, ಶೇಷ ಹಾಗೂ ರುದ್ರ, ಈ ಮೂವರು ಸಮರು. ಈ ಮೂವರು ಅಹಂಕಾರ ತತ್ತ್ವಕ್ಕೆ ಅಭಿಮಾನಿಗಳು ಹಾಗೂ ಮನೋನಿಯಾಮಕರು. ರುದ್ರದೇವರು ಮುಂದೆ ಶೇಷಪದವಿಗೆ ಬರುವರು. ಸುಪರ್ಣೀ ಗರುಡ ಪತ್ನಿ, ವಾರುಣೀ ಶೇಷಪತ್ನಿ ಹಾಗೂ ಪಾರ್ವತಿಯು ರುದ್ರಪತ್ನಿ.

೭. ಗರುಡ ಹಾಗೂ ಸುಪರ್ಣೀ ಇಬ್ಬರಿಗೂ ಅವತಾರವಿಲ್ಲ. ಶೇಷದೇವರು ಲಕ್ಷ್ಮಣ, ಬಲರಾಮ, ನರ ಎಂಬುದಾಗಿ ಅವತರಿಸಿರುವರು. ವಾರುಣಿಯು ರೇವತಿಯಾಗಿ ಅವತರಿಸಿದಳು. ರುದ್ರದೇವರು ಶುಕ, ಅಶ್ವತ್ಥಾಮ, ದುರ್ವಾಸ ಮಹರ್ಷಿ, ಜೈಗೀಷವ್ಯ ಮೊದಲಾದ ಅನೇಕ ಅವತಾರಗಳನ್ನು ಹೊಂದಿರುವರು.

೮. ಬ್ರಹ್ಮ ವಾಯುಗಳಿಬ್ಬರು ಸಮನಾದ್ದರಿಂದ ಬ್ರಹ್ಮವಾಯೂ ಎಂದು ಒಟ್ಟಾಗಿ ಹೇಳಬೇಕಿತ್ತು. ಆದರೆ ಹಾಗೆ ಮಾಡದೇ ಬ್ರಹ್ಮದೇವರನ್ನು ಪ್ರತ್ಯೇಕವಾಗಿ ಹೇಳಿ ವಾಯುಗಿರೀಶಶೇಷಗರುಡಾ ಎಂದು ಹೇಳಿರುವುದು ಏತಕ್ಕೆ? ಎಂಬ ಪ್ರಶ್ನೆಗೆ ಅವಕಾಶವಿದೆ. ಅದಕ್ಕೆ ಬ್ರಹ್ಮದೇವರು ಅವತಾರವಿಲ್ಲದವರು; ಪರಕಾಲದ ವರೆಗೆ ಒಂದೇ ರೂಪದಿಂದ ಇರುವವರು. ಶ್ರೀವಾಯುದೇವರು ಅವರಿಗೆ ಸಮರೇ ಆಗಿದ್ದರೂ ಹನುಮಂತ, ಭೀಮಸೇನ, ಮಧ್ವ ಮೊದಲಾದ ರೂಪಗಳಿಂದ ಅವತರಿಸಿರುವರು. ಈ ವ್ಯತ್ಯಾಸವನ್ನು ತಿಳಿಸಲೆಂದು ಬ್ರಹ್ಮದೇವರನ್ನು ಪ್ರತ್ಯೇಕವಾಗಿ ಹೇಳಿರುವರು ಎಂದು ತಿಳಿಯಬೇಕು.

೯. ಹಾಗಿದ್ದಲ್ಲಿ ಗರುಡನಿಗೆ ಅವತಾರವಿಲ್ಲದಿದ್ದರೂ ಸಹ ಆತನಿಗೆ ವಾಯುಪುತ್ರತ್ವೇನ ಹಾಗೂ ಕಶ್ಯಪಪುತ್ರತ್ವೇನ ಮತ್ತೊಂದು ರೀತಿಯಲ್ಲಿ ಹುಟ್ಟು ಇರುವುದು. ಆದ್ದರಿಂದ ಅವರಿಗೆ ಮನುಷ್ಯರಲ್ಲಿ ಅವತಾರವಿಲ್ಲದಿದ್ದರೂ ಸಹ ಈ ರೀತಿಯಾದ ಹುಟ್ಟುಗಳು ಇರುವುದರಿಂದ ಅವರನ್ನು ಶೇಷರುದ್ರರೊಂದಿಗೆ ಸೇರಿಸಿರುವುದು ಉಚಿತವಾಗಿದೆ.

೧೦. ಇಂದ್ರ, ಕಾಮರು ಸಮರು. ಇವರ ಸ್ಥಾನ ಪುರುಷ ದೇವತೆಗಳಲ್ಲಿ ಗರುಡ, ಶೇಷ, ರುದ್ರದೇವರ ಅನಂತರದ್ದು. ಶಚಿ ಇಂದ್ರಪತ್ನಿ, ರತಿ ಕಾಮಪತ್ನಿ.

೧೧. ಇಂದ್ರ – ವಾಲಿ, ಕುಶ, ಅರ್ಜುನ, ಗಾಧಿ ಮೊದಲಾದ ಅನೇಕ ಅವತಾರಗಳನ್ನು ಹೊಂದಿರುವನು. ಶಚಿಯು ತಾರಾ, ಚಿತ್ರಾಂಗದೆಯಾಗಿ ಅವತರಿಸಿದಳು. ಕಾಮ ಭರತ, ಪ್ರದ್ಯುಮ್ನ, ಸಾಂಬ, ಷಣ್ಮುಖ ಮೊದಲಾದ ಅನೇಕ ಅವತಾರಗಳನ್ನು ಹೊಂದಿರುವನು. ರತಿಯು ಲಕ್ಷಣಾ, ಮೊದಲಾದ ರೂಪಗಳನ್ನು ಹೊಂದಿರುವಳು.

೧೨. '**ಗುರು**' ಎಂದರೆ ಬೃಹಸ್ಪತ್ಯಾಚಾರ್ಯರು, ತಾರೆ ಇವರ ಪತ್ನಿ. ತಾರ ನಾಮಕ ಕಪಿ, ದ್ರೋಣಾಚಾರ್ಯರು, ಉದ್ಧವ ಇವು ಬೃಹಸ್ಪತಿಯ ಅವತಾರಗಳು. ದ್ರೋಣಪತ್ನಿ ಕೃಪೀದೇವಿಯು ತಾರೆಯ ಅವತಾರ.

೧೩. ಸೂರ್ಯ, ಚಂದ್ರರು ಬೆಳಕು ನೀಡುವ ದೇವತೆಗಳು. ಹಗಲು ಬೆಳಗುವವನು ಸೂರ್ಯನಾದರೆ, ರಾತ್ರಿ ಬೆಳಗುವವನು ಚಂದ್ರ. ಸೂರ್ಯನ ಪ್ರಕಾಶವೇ ಚಂದ್ರನ ಮೇಲೆ ಪ್ರತಿಫಲಿಸಿ ಬೆಳದಿಂಗಳಾಗಿ ಲಭಿಸುವುದು. ಇವರೊಳಗಿದ್ದು ಮುಖ್ಯವಾಗಿ ಬೆಳಗುವವನು ಸಾಕ್ಷಾತ್ ಶ್ರೀಹರಿ. ತಾರತಮ್ಯದಲ್ಲಿ ಇವರಿಬ್ಬರು ಸಮರು. ಸಂಜ್ಞಾ, ಛಾಯಾ ಸೂರ್ಯಪತ್ನಿ, ರೋಹಿಣಿಯು ಚಂದ್ರನ ಪಟ್ಟದರಸಿ.

೧೪. ಸುಗ್ರೀವ, ಕರ್ಣ, ಮೊದಲಾದವು ಸೂರ್ಯನ ಅವತಾರಗಳು; ಅಂಗದ, ಚಂದ್ರನ ಅವತಾರ. ಅಭಿಮನ್ಯುವು ಬುಧನ ಅವತಾರ; ಅವನಲ್ಲಿ ಚಂದ್ರನ ಅಂಶ.

೧೫. '**ವರುಣ**' ಎಂದರೆ ರಸನಾಭಿಮಾನಿ ದೇವತೆ, **ಅನಲ** ಬೆಂಕಿಯ ಅಭಿಮಾನಿ. ಗಂಗಾ ವರುಣ ಪತ್ನಿ; ಸ್ವಾಹಾ ಅಗ್ನಿಪತ್ನಿ.

೧೬. ಸುಷೇಣ, ಶಂತನು, ಮಹಾಭಿಷಕ್, ಮಂಡೂಕ ಮೊದಲಾದವು ವರುಣನ ಅವತಾರ. ನೀಲ, ಧೃಷ್ಟದ್ಯುಮ್ನ ಅಗ್ನಿಯ ಅವತಾರ.

೧೭. '**ಮನು**' ಎಂದರೆ ಸ್ವಾಯಂಭುವ ಮನು. ಇದರಿಂದ ವೈವಸ್ವತ ಮನು ಮೊದಲಾದವರು ಉಪಲಕ್ಷಿತ ಎಂದು ತಿಳಿಯಬೇಕು. ಯಮ ನರಕಾಧಿಪತಿಯಾದ ದೇವತೆ. ಸ್ವಾಯಂಭುವ ಮನುವಿನ ಪತ್ನಿ ಶತರೂಪಾದೇವೀ. ಯಮಪತ್ನೀ ಶ್ಯಾಮಲಾ.

೧೮. '**ದಶರಥ**' ಸ್ವಾಯಂಭುವ ಮನುವಿನ ಅವತಾರ, ಯುಧಿಷ್ಠಿರ, ಜಾಂಬವಂತ, ವಿದುರ ಇವು ಯಮನ ಅವತಾರ. ಶಿಶುಪಾಲನ ಪುತ್ರಿ ದೇವಕಿಯು ಶ್ಯಾಮಲೆಯ ಅವತಾರ.

೧೯. '**ವಿತ್ತೇಶ್ವರ**' ವಿತ್ತೇಶ ಎಂದರೆ ಕುಬೇರ, ವಿಘ್ನೇಶ್ವರ ಗಣೇಶ. ಕುಬೇರ ರಾಮಾ-ಯಣದಲ್ಲಿ ಕಥನ ನಾಮಕ ಕಪಿಯಾಗಿ ಅವತರಿಸಿದ್ದ, ಭಗದತ್ತ ಇವನ ಇನ್ನೊಂದು ಅವತಾರ. ಗಣೇಶನು ರುಗ್ಮಿಣಿಯ ಮಗನಾದ ಚಾರುದೇಷ್ಣ ಎಂದ ಹೆಸರಿನಿಂದ ಅವತರಿಸಿದ್ದ.

೨೦. '**ನಾಸತ್ಯರು**' ಎಂದರೆ ಅಶ್ವಿನೀ ದೇವತೆಗಳು. ಉಷಾ ಇವರ ಪತ್ನಿ. ರಾಮಾಯಣದಲ್ಲಿ ಮೈಂದವಿವಿದರು, ಮಹಾಭಾರತದ ಕಾಲದಲ್ಲಿ ನಕುಲ-ಸಹದೇವರು ಇವರ ಅವತಾರ.

೨೧. '**ನಿರ್ಋತಿ**' ನೈರುತ್ಯ ದಿಕ್ಕಿನ ಅಧಿಪತಿ. ದುರ್ಮುಖನಾಗಿ ರಾಮಾಯಣದಲ್ಲಿ; ಘಟೋತ್ಕಚನಾಗಿ ಮಹಾಭಾರತದಲ್ಲಿ ಅವತಾರ.

೨೨. '**ಮರುದ್ಗಣ**'ಗಳು ಒಟ್ಟು ೪೯ ಜನ[1]. ಅದರಲ್ಲಿ ಅಹಂಕಾರಿಕ ಪ್ರಾಣ, ಪ್ರವಹ ವಾಯು, ಕೇಸರಿ(ಧ್ರುವ) ಮೊದಲಾದವರು ಸೇರಿರುವರು. ಇವರಲ್ಲಿ ಅನೇಕರು ರಾಮಾಯಣ-ಮಹಾಭಾರತ ಕಾಲದಲ್ಲಿ ಅವತರಿಸಿದ್ದರು. ಉದಾ: ಚೇಕಿತಾನನು ಪ್ರತಿಭ ಎಂಬ ಮರುತ್ತಿನ ಅವತಾರ.

೨೩. '**ಪರ್ಜನ್ಯ**' ದ್ವಾದಶಾದಿತ್ಯರಲ್ಲಿ ಒಬ್ಬ, ಮಿತ್ರನು ಸಹ ದ್ವಾದಶಾದಿತ್ಯರಲ್ಲಿ ಒಬ್ಬ ಮಿತ್ರನಾಮಕ ಸೂರ್ಯ ಭೀಷ್ಮಕ ರಾಜನಾಗಿ ಅವತರಿಸಿದ್ದ

೨೪. ಇಂತಹ ಬ್ರಹ್ಮಾದಿ ದೇವತೆಗಳು ಹಾಗೂ ಅವರ ಪತ್ನಿಯರು ಸದಾ ಮಂಗಳವನ್ನು ಉಂಟು ಮಾಡಲಿ ಎಂಬುದು ಇಲ್ಲಿಯ ಆಶಯ.

೨೫. ಹರಿಭಕ್ತಿಯಂತೆ, ತಾರತಮ್ಯಕ್ರಮದಲ್ಲಿ ದೇವತಾ ಭಕ್ತಿಯು ಸಹ ಮುಕ್ತಿಗೆ ಸಾಧಕ:

ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ।
ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥

- ಶ್ರೀಹರಿವಾಯುಸ್ತುತಿಯಲ್ಲೂ ಈ ವಿಷಯ ನಿರೂಪಿತವಾಗಿದೆ:

ವಿಷ್ಣೋರತ್ಯುತ್ತಮತ್ವಾದಖಿಲಗುಣಗಣೈಸ್ತತ್ರ ಭಕ್ತಿಂ ಗರಿಷ್ಠಾ-
ಮಾಶ್ಲಿಷ್ಟೇ ಶ್ರೀಧರಾಭ್ಯಾಮಮುಮಥ ಪರಿವಾರಾತ್ಮನಾ ಸೇವಕೇಷು।
ಯಃ ಸಂಧತ್ತೇ ವಿರಿಂಚಿಶ್ವಸನವಿಹಗಪಾನಂತರುದ್ರೇಂದ್ರಪೂರ್ವೇ-
ಷ್ವಾಧ್ಯಾಯಂಸ್ತಾರತಮ್ಯಂ ಸ್ಫುಟಮವತಿ ಸದಾ ವಾಯುರಸ್ಮದ್ಗುರುಸ್ತಮ್ ॥

೨೬. ಸಕಲ ದೇವತೆಗಳ ಅನುಗ್ರಹವು ಅತ್ಯಗತ್ಯವಾದರೂ, ಇದರಲ್ಲಿ ಪ್ರಧಾನ ದೇವತೆಗಳ ಉಲ್ಲೇಖ ಮಾತ್ರ ಬಂದಿದ್ದು ಉಳಿದವರು ಇಲ್ಲಿ ಉಪಲಕ್ಷಿತ ಎಂದು ತಿಳಿಯಬೇಕು.

---

೧. ೪೯ ಮರುತ್ತುಗಳ ವಿವರ ಹೀಗಿದೆ:

೧. ಪ್ರಾಣ; ೨. ಅಪಾನ; ೩. ವ್ಯಾನ; ೪. ಉದಾನ; ೫. ಸಮಾನ; ೬. ನಾಗ; ೭. ಕೃಕಲ; ೮. ಕೂರ್ಮ; ೯. ದೇವದತ್ತ; ೧೦. ಧನಂಜಯ; ೧೧. ಪ್ರವಹ; ೧೨. ವಿವಹ; ೧೩. ಶಂಯು; ೧೪. ಸಂವಹ; ೧೫.ಪರಾವಹ; ೧೬. ಉದ್ವಹ; ೧೭. ಆವಹ; ೧೮. ಶಂಕು; ೧೯. ಕಾಲ; ೨೦. ಶ್ವಾಸ; ೨೧. ಅನಿಲ; ೨೨. ಅನಲ; ೨೩. ಪ್ರತಿಭ; ೨೪. ಕುಮುದ; ೨೫. ಕಾಂತ; ೨೬. ಶುಚಿ; ೨೭. ಶ್ವೇತ; ೨೮. ಅಜಿತ; ೨೯. ಗುರು; ೩೦. ಸಂಜ್ಞ; ೩೧. ಸಂವರ್ತಕ; ೩೨. ಕೀಲ(ಕಾಲ); ೩೩. ಅದಿತಿ; ೩೪. ಸೌಮ್ಯ; ೩೫. ಕಪಿ; ೩೬. ಜಡ; ೩೭. ಮಂಡೂಕ; ೩೮. ಸಂತತ; ೩೯. ಸಿದ್ಧ ೪೦. ಋತು(ರಕ್ತ); ೪೧. ಕೃಷ್ಣ ೪೨. ಪಿಕ; ೪೩. ಶುಕ; ೪೪. ಯತಿ; ೪೫. ಭೀಮ; ೪೬. ಹನು; ೪೭. ಪಿಂಗ; ೪೮.ಅಹಂಪ್ರಾಣ; ೪೯. ಕಂಪನ.

೨೭. '**ಪ್ರತಿದಿನಂ**' ಎಂದು ಹೇಳುವ ಮೂಲಕ ಇವರ ಸ್ತೋತ್ರ ಸದಾ ಕರ್ತವ್ಯ ಎಂಬ ವಿಶೇಷಾಂಶ ಸೂಚಿತ.

೨೮. ಇವರೆಲ್ಲರ ಸ್ತುತಿಯನ್ನು ಸರ್ವೋತ್ತಮತ್ವಾದಿ ರೂಪದಿಂದ ಮಾಡದೇ, ತಾರತಮ್ಯ ಕ್ರಮದಲ್ಲಿಯೇ ಮಾಡಬೇಕು. ಪ್ರತಿಯೊಬ್ಬರಲ್ಲೂ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗನಾದ ಶ್ರೀಹರಿಯ ಚಿಂತನೆಯನ್ನು ಮಾಡಿಯೇ ಪೂಜಿಸಬೇಕು ಎಂಬುದು ವಿಶೇಷಾಂಶ.

೨೯. '**ಕುರ್ವಂತು ನೋ ಮಂಗಲಂ**' ಎಂಬುದಕ್ಕೆ ನೋ ಅಮಂಗಲಂ ಕುರ್ಯಾತ್ ಎಂದೂ ವಿಭಾಗ ಮಾಡಬಹುದು. ಆದರಿಂದ ಇವರು ಎಂದೂ ನಮಗೆ ಅಮಂಗಲವನ್ನು ಉಂಟು ಮಾಡದಿರಲಿ ಎಂಬ ವಿಶೇಷಾರ್ಥ ಲಭಿಸುವುದು.

೩೦. ಸುಖವು ದುಃಖದ ಸಂಪರ್ಕವನ್ನು ಹೊಂದದಿದ್ದಲ್ಲಿ ಮಾತ್ರವೇ ಹೇಗೆ ಪೂರ್ಣವೆನ್ನಿಸುವುದೋ ಹಾಗೆ ಮಂಗಲವು ಅಮಂಗಲದ ಸಂಪರ್ಕವನ್ನು ಹೊಂದದಿದ್ದಾಗ ಮಾತ್ರ ಪೂರ್ಣವೆನ್ನಿಸುವುದು ಎಂಬ ವಿಶೇಷಾಂಶ ಇದರಿಂದ ಸೂಚಿತ.

೩೧. '**ಸಸ್ತ್ರೀಕಾಃ**' ಎಂಬುದಕ್ಕೆ ಅವರ ಸ್ತ್ರೀಯರ ಸಮೇತರಾಗಿ ಎಂದರ್ಥ. ಇಲ್ಲಿ ಸ್ತ್ರೀಯರು ಎಂದರೆ ಆಯಾದೇವತೆಗಳ ಪತ್ನಿಯರು ಎಂದು ಭಾವ. ಬ್ರಹ್ಮಪತ್ನೀ-ಸರಸ್ವತಿ, ವಾಯುಪತ್ನೀ-ಭಾರತೀ, ಶಿವಪತ್ನೀ-ಪಾರ್ವತಿ, ಶೇಷಪತ್ನೀ-ವಾರುಣಿ, ಗರುಡಪತ್ನೀ-ಸುಪರ್ಣಿ, ಇಂದ್ರಪತ್ನೀ-ಶಚೀ, ಕಾಮಪತ್ನೀ-ರತಿ, ಗುರುಪತ್ನೀ-ತಾರಾ, ಚಂದ್ರಪತ್ನೀ-ರೋಹಿಣೀ, ಸೂರ್ಯಪತ್ನೀ-ಸಂಜ್ಞಾ, ವರುಣಪತ್ನೀ-ಗಂಗಾ, ಅಗ್ನಿಪತ್ನೀ-ಸ್ವಾಹಾ, ಸ್ವಾಯಂಭುವಮನುಪತ್ನೀ-ಶತರೂಪಾ (ವೈವಸ್ವತಮನುಪತ್ನಿ-ಶ್ರದ್ಧಾ), ಯಮಪತ್ನೀ-ಶ್ಯಾಮಲಾ, ಕುಬೇರಪತ್ನೀ-ಋದ್ಧಿ[೧], ವಿನಾಯಕ ಪತ್ನಿಯರು-ಸಿದ್ಧಿಬುದ್ಧಿ ಅಶ್ವಿನೀಪತ್ನೀ-ಉಷಾ, ನಿರ್ಋತಿಪತ್ನೀ-ದೀರ್ಘಾ.

೩೨. ಇಲ್ಲಿ ಬ್ರಹ್ಮಾದಿ ದೇವತೆಗಳು ನೀಡುವ ಮಂಗಲ ಎಂದರೆ ಅವರ ಅಧಿಕಾರವ್ಯಾಪ್ತಿಯಲ್ಲಿ ಬರುವ ವಿಶಿಷ್ಟ ಫಲಗಳು ಎಂದರ್ಥ. ಶ್ರೀಮದ್ಭಾಗವತಾದಿ ಗ್ರಂಥಗಳಿಂದ ತಿಳಿಯುವಂತೆ ಆ ದೇವತೆಗಳು ನೀಡಬಲ್ಲ ವಿಶೇಷ ಫಲಗಳು ಹೀಗಿವೆ:

೩೩. ಬ್ರಹ್ಮದೇವರು-ವಿಶ್ವದ ಸಾಮ್ರಾಟ ಪದವಿ; ವಾಯುದೇವರು-ಜ್ಞಾನ ಹಾಗೂ ಬಲ; ಶಿವ-ಮನೋನಿಯಂತ್ರಣ; ಶೇಷ-ವ್ಯಾಖ್ಯಾನ ಕೌಶಲ; ಗರುಡ- ವೇದಾರ್ಥ-ಪ್ರಕಾಶ; ಇಂದ್ರ-ಇಂದ್ರಿಯ ಪಾಟವ; ಕಾಮ-ವೈರಾಗ್ಯ; ಬೃಹಸ್ಪತಿ- ಬ್ರಹ್ಮವರ್ಚಸ್ಸು;

೧. ಮಹಾಭಾರತ (ಅನುಶಾಸನಪರ್ವ/೧೬೫/೧೧)

ಚಂದ್ರ-ಮನಸ್ಸಿಗೆ ಸಂತೋಷ; ಸೂರ್ಯ-ಪ್ರಕಾಶ; ವರುಣ-ನೀರು; ಅನಲ-ಬೆಂಕಿ; ಮನು-ಸಂತತಿ; ಯಮ-ನರಕದಿಂದ ರಕ್ಷಣೆ; ಕುಬೇರ-ಸಂಪತ್ತು; ವಿನಾಯಕ-ವಿಘ್ನನಿವಾರಣೆ; ಅಶ್ವಿನಿಗಳು-ಆರೋಗ್ಯ; ನಿರ್ಋತಿ-ವಾಮಾಚಾರದಿಂದ ರಕ್ಷಣೆ; ಮರುದ್ಗಣಗಳು-ಬಗೆಬಗೆಯ ಗುಣಗಳು; ಪರ್ಜನ್ಯ-ಮಳೆ; ಮಿತ್ರ-ಶುದ್ಧಿ.

೩೪. ಈ ದೇವತೆಗಳ ಸ್ಮರಣೆಯಿಂದ ಇಂತಹ ಫಲಗಳು ಲಭಿಸುವವು ಎಂದರ್ಥ.

೩೫. ಪ್ರತಿನಿತ್ಯ ಪಠ್ಯವಾದ ಈ ಕೆಳಗಿನ ಪ್ರಾತಃಸ್ತೋತ್ರದ ವಿವರಣೆಯಂತೆ ಈ ಶ್ಲೋಕವಿದೆ:

ನಮೋ ವಸ್ತಾತ್ತ್ವಿಕಾ ದೇವಾ ವಿಷ್ಣುಭಕ್ತಿಪರಾಯಣಾಃ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ॥

೩೬. ಈ ಶ್ಲೋಕವು ದ್ವಾದಶಸ್ತೋತ್ರದ ಈ ಕೆಳಗಿನ ಶ್ಲೋಕದ ವಿವರಣೆಯೂ ಆಗಿದೆ:

ಬ್ರಹ್ಮೇಶಶಕ್ರರವಿಧರ್ಮಶಶಾಂಕಪೂರ್ವ-
ಗೀರ್ವಾಣಸಂತತಿರಿಯಂ ಯದಪಾಂಗಲೇಶಮ್।
ಆಶ್ರಿತ್ಯ ವಿಶ್ವವಿಜಯಂ ವಿಸೃಜತ್ಯಚಿಂತ್ಯಾ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ॥ (೭/೨)

೩೭. ಈ ಶ್ಲೋಕದಲ್ಲಿ ಸಾಮಾನ್ಯತಃ ದೇವತೆಗಳು ತಾರತಮ್ಯಕ್ರಮದಲ್ಲಿಯೇ ಹೇಳಲ್ಪಟ್ಟಿದ್ದರೂ, ಅಲ್ಲಲ್ಲಿ ಆಗಿರುವ ಸ್ವಲ್ಪ ಕ್ರಮವ್ಯತ್ಯಾಸವು ವಿವಕ್ಷಾಭೇದದ ಕಾರಣದಿಂದಾಗಿ ಎಂದು ತಿಳಿಯಬೇಕು. ಬ್ರಹ್ಮವಾಯುಗಳನ್ನು ಒಟ್ಟಾಗಿ ಹೇಳಿದಿರುವಲ್ಲಿ ಹೇಗೋ ಹಾಗೆ.

೩೮. ಪ್ರತಿನಿತ್ಯದ ಪಂಚಮಹಾಯಜ್ಞಗಳಲ್ಲಿ ಒಂದಾದ ವೈಶ್ವದೇವ ಈ ದೇವತೆಗಳ ಆರಾಧನೆಯಾಗಿದೆ.

೩೯. ಇವರಲ್ಲಿ ಹೆಚ್ಚಿನವರು ತತ್ತ್ವಾಭಿಮಾನಿಗಳಾಗಿದ್ದು ಆ ವಿವರ ಹೀಗಿದೆ:

ಬ್ರಹ್ಮವಾಯು-ಮಹತ್ತತ್ತ್ವ; ಸರಸ್ವತಿಭಾರತಿಯರು-ಅವ್ಯಕ್ತ; ಗರುಡಶೇಷರುದ್ರರು-ಅಹಂಕಾರತತ್ತ್ವ; ಇಂದ್ರಕಾಮರು- ಮನಸ್ತತ್ತ್ವ; ಬೃಹಸ್ಪತಿ- ಶಬ್ದ; ಸೂರ್ಯ-ಚಕ್ಷುಸ್ಸು; ಚಂದ್ರ-ಶ್ರೋತ್ರ; ವರುಣ-ಜಿಹ್ವೆ; ಅಗ್ನಿ-ತೇಜಸ್ಸು; ಸ್ವಾಯಂಭುವ ಮನು-ಉಪಸ್ಥ; ಗಣೇಶ-ಭೂತಾಕಾಶ; ಅಶ್ವಿನಿಗಳು- ಘ್ರಾಣ; ಮಿತ್ರ-ಪಾಯು.

*****

## - ೩ -

## ಪುಣ್ಯಪ್ರದರಾದ ಋಷಿಮುನಿಗಳು

**ವಿಶ್ವಾಮಿತ್ರಪರಾಶರೌರ್ವಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ**
**[1]ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।**
**ಮಾಂಡವ್ಯೋ ಜಮದಗ್ನಿಗೌತಮಭರದ್ವಾಜಾದಯಸ್ತಾಪಸಾಃ**
**ಶ್ರೀವಿಷ್ಣೋಃ ಪದಪದ್ಮಚಿಂತನರತಾಃ ಕುರ್ವಂತು ನೋ ಮಂಗಲಮ್ ॥**

ವಿಶ್ವಾಮಿತ್ರಪರಾಶರೌರ್ವಭೃಗವಃ, ಅಗಸ್ತ್ಯಃ, ಪುಲಸ್ತ್ಯಃ, ಕ್ರತುಃ, ಶ್ರೀಮಾನ್, ಅತ್ರಿಮರೀಚಿಕೌತ್ಸಪುಲಹಾಃ, ಶಕ್ತಿಃ, ವಸಿಷ್ಠಃ, ಅಂಗಿರಾಃ, ಮಾಂಡವ್ಯಃ, ಜಮದಗ್ನಿ-ಗೌತಮಭರದ್ವಾಜಾದಯಃ, ತಾಪಸಾಃ, [2]ಶ್ರೀವಿಷ್ಣೋಃ, ಪದಪದ್ಮಚಿಂತನರತಾಃ, ಕುರ್ವಂತು, ನಃ, ಮಂಗಲಮ್.

**ಅನು: ಮಹಾವಿಷ್ಣುವಿನ ಪಾದಕಮಲವನ್ನು ಧ್ಯಾನಿಸುವುದರಲ್ಲೇ ನಿರತರಾದ ಶ್ರೀಮಾನ್ ವಿಶ್ವಾಮಿತ್ರ, ಪರಾಶರ, ಔರ್ವ, ಭೃಗು, ಅಗಸ್ತ್ಯ, ಪುಲಸ್ತ್ಯ, ಕ್ರತು, ಅತ್ರಿ, ಮರೀಚಿ, ಕೌತ್ಸ ಪುಲಹ, ಶಕ್ತಿ, ವಸಿಷ್ಠ ಅಂಗೀರಸ, ಮಾಂಡವ್ಯ, ಜಮದಗ್ನಿ, ಗೌತಮ, ಭರದ್ವಾಜ ಮೊದಲಾದ ತಪಸ್ವಿಗಳು ನಮಗೆ ಮಂಗಲವನ್ನು ಉಂಟು ಮಾಡಲಿ.**

ವಿ. ೧: ಹಿಂದಿನ ಶ್ಲೋಕದಲ್ಲಿ ಬ್ರಹ್ಮಾದಿ ದೇವತೆಗಳು ಮಂಗಲವನ್ನು ಕರುಣಿಸಲಿ ಎಂದು ಪ್ರಾರ್ಥಿಸಿ ಈ ಶ್ಲೋಕದಲ್ಲಿ ವಿಶ್ವಾಮಿತ್ರಾದಿ ಋಷಿಗಳು ಮಂಗಲವನ್ನು ಉಂಟುಮಾಡಲಿ ಎಂದು ಪ್ರಾರ್ಥಿಸಲಾಗಿದೆ. ಈ ಕ್ರಮವು 'ದೇವರ್ಷಿಪಿತೃಪನರಾ ಇತಿ ಮುಕ್ತಾಸ್ತು ಪಂಚಧಾ' ಎಂಬ ತತ್ತ್ವಸಂಖ್ಯಾನೋಕ್ತ ಕ್ರಮಕ್ಕೆ ಅನುಗುಣವಾಗಿದೆ.

೨. '**ತಾಪಸರು**[3]' ಎಂದರೆ ತಪಸ್ಸನ್ನು ಮಾಡಿ ಸಿದ್ಧಿ ಪಡೆದವರು ಎಂದರ್ಥ. ತಪಸ್ಸು

---

೧. ಶ್ರೀಮಾನತ್ರಿಮರೀಚ್ಯುಚಥ್ಯಪುಲಹಾಃ (ಪಾ.)

೨. ಶ್ರೀಮದ್ವಿಷ್ಣುಪದಾಂಬುಜೈಕಶರಣಾಃ (ಪಾ.)

೩. ಮಹಾಭಾರತದಲ್ಲಿ ಬಂದಿರುವಂತೆ ಋಷಿಮುನಿಗಳ ವಿವರ ಹೀಗಿದೆ:
ಅತ ಊರ್ಧ್ವಂ ಪ್ರವಕ್ಷ್ಯಾಮಿ ಮಾನವಾನ್ ಋಷಿಸತ್ತಮಾನ್ ॥
ಯವಕ್ರೀತಶ್ಚ ರೈಭ್ಯಶ್ಚ ಅರ್ವಾವಸುಪರಾವಸೂ ।
ಔಶಿಜಶ್ಚೈವ ಕಕ್ಷೀವಾನ್ ಬಲಶ್ಚಾಂಗಿರಸಃ ಸುತಃ ॥
ಋಷಿರ್ಮೇಧಾತಿಥೇಃ ಪುತ್ರಃ ಕಣ್ವೋ ಬರ್ಹಿಷದಸ್ತಥಾ ।
ಬ್ರಹ್ಮತೇಜೋಮಯಾಃ ಸರ್ವೇ ಕೀರ್ತಿತಾ ಲೋಕಭಾವನಾಃ ॥
ಲಭಂತೇ ಹಿ ಶುಭಂ ಸರ್ವೇ ರುದ್ರಾನಲವಸುಪ್ರಭಾಃ ।
ಭುವಿ ಕೃತ್ವಾ ಶುಭಂ ಕರ್ಮ ಮೋದಂತೇ ದಿವಿ ದೈವತೈಃ ॥

ಮಹೇಂದ್ರಗುರವಃ ಸಪ್ತ ಪ್ರಾಚೀಂ ವೈ ದಿಶಮಾಶ್ರಿತಾಃ।
ಪ್ರಯತಃ ಕಿರ್ತಯೇದೇತಾನ್ ಶಕ್ರಲೋಕೇ ಮಹೀಯತೇ॥
ಉನ್ಮುಚುಃ ಪ್ರಮುಚುಶ್ಚೈವ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್।
ದೃಢವ್ಯಶ್ಚೋರ್ಧ್ವಬಾಹುಶ್ಚ ತೃಣಸೋಮಾಂಗಿರಾಸ್ತಥಾ॥
ಮಿತ್ರಾವರುಣಯೋಃ ಪುತ್ರಸ್ತಥಾಽಗಸ್ತ್ಯ ಪ್ರತಾಪವಾನ್।
ಧರ್ಮರಾಜರ್ತ್ವಿಜಃ ಸಪ್ತ ದಕ್ಷಿಣಾಂ ದಿಶಮಾಶ್ರಿತಾಃ॥
ದೃಢೇಯುಶ್ಚ ಋತೇಯುಶ್ಚ ಪರಿವ್ಯಾಧಶ್ಚ ಕೀರ್ತಿಮಾನ್।
ಏಕತಶ್ಚ ದ್ವಿತಶ್ಚೈವ ತ್ರಿತಶ್ಚಾದಿತ್ಯಸನ್ನಿಭಾಃ॥
ಅತ್ರೇಃ ಪುತ್ರಶ್ಚ ಧರ್ಮಾತ್ಮಾ ಋಷಿಃ ಸಾರಸ್ವತಸ್ತಥಾ।
ವರುಣಸ್ಯರ್ತ್ವಿಜಃ ಸಪ್ತ ಪಶ್ಚಿಮಾಂ ದಿಶಮಾಶ್ರಿತಾಃ॥
ಅತ್ರಿರ್ವಸಿಷ್ಠೋ ಭಗವಾನ್ ಕಶ್ಯಪಶ್ಚ ಮಹಾನ್ ಋಷಿಃ।
ಗೌತಮಶ್ಚ ಭರದ್ವಾಜೋ ವಿಶ್ವಾಮಿತ್ರೋಽಥ ಕೌಶಿಕಃ॥
ಋಚೀಕತನಯಶ್ಚೋಗ್ರೋ ಜಮದಗ್ನಿಃ ಪ್ರತಾಪವಾನ್।
ಧನೇಶ್ವರಸ್ಯ ಗುರವಃ ಸಪ್ತೈತೇ ಉತ್ತರಾಶ್ರಿತಾಃ॥
ಅಪರೇ ಮುನಯಃ ಸಪ್ತ ದಿಕ್ಷು ಸರ್ವಾಸ್ವಧಿಷ್ಠಿತಾಃ।
ಕೀರ್ತಿಸ್ವ ಸ್ತಿಕರಾ ನೄಣಾಂ ಕೀರ್ತಿತಾ ಲೋಕಭಾವನಾಃ॥
ಧರ್ಮಃ ಕಾಮಶ್ಚ ಕಾಲಶ್ಚ ವಸುರ್ವಾಸುಕಿರೇವ ಚ।
ಅನಂತಃ ಕಪಿಲಶ್ಚೈವ ಸಪ್ತೈತೇ ಧರಣೀಧರಾಃ॥
ರಾಮೋ ವ್ಯಾಸಸ್ತಥಾ ದ್ರೌಣಿರಶ್ವತ್ಥಾಮಾ ಚ ಲೋಮಶಃ।
ಇತ್ಯೇತೇ ಮುನಯೋ ದಿವ್ಯಾ ಏಕೈಕಃ ಸಪ್ತ ಸಪ್ತಧಾ॥
ಶಾಂತಿಸ್ವಸ್ತಿಕರಾ ಲೋಕೇ ದಿಶಾಂಪಾಲಾಃ ಪ್ರಕೀರ್ತಿತಾಃ।
ಯಸ್ಯಾಂ ಯಸ್ಯಾಂ ದಿ[illegible]ತೇ ತನ್ಮುಖಃ ಶರಣಂ ವ್ರಜೇತ್॥
ಸ್ರಷ್ಟಾರಃ ಸರ್ವಭೂತಾನಾಂ ಕೀರ್ತಿತಾ ಲೋಕಪಾವನಾಃ।
ಸಂವರ್ತೋ ಮೇರುಸಾವರ್ಣೋ ಮಾರ್ಕಂಡೇಯಶ್ಚ ಧಾರ್ಮಿಕಃ॥
ಸಾಂಖ್ಯಯೋಗೌ ನಾರದಶ್ಚ ದುರ್ವಾಸಶ್ಚ ಮಹಾನ್ ಋಷಿಃ।
ಅತ್ಯಂತತಪಸೋ ದಾಂತಾಸ್ತ್ರಿಷು ಲೋಕೇಷು ವಿಶ್ರುತಾಃ॥
ಅಪರೇ ರುದ್ರಸಂಕಾಶಾಃ ಕೀರ್ತಿತಾ ಬ್ರಹ್ಮಲೌಕಿಕಾಃ।
ಅಪುತ್ರೋ ಲಭತೇ ಪುತ್ರಂ ದರಿದ್ರೋ ಲಭತೇ ಧನಮ್॥
ತಥಾ ಧರ್ಮಾರ್ಥಕಾಮೇಷು ಸಿದ್ಧಿಂ ಚ ಲಭತೇ ನರಃ।

–ಮಹಾಭಾರತ (ಅ.ಪ/೧೫೦/೨೯-೪೬)

ಸೌಮ್ಯಾ ಗೌಃ ಸುರಭಿರ್ದೇವೀ ವಿಶ್ರವಾಶ್ಚ ಮಹಾನ್ ಋಷಿಃ।
ಸಂಕಲ್ಪಃ ಸಾಗರೋ ಗಂಗಾ ಸ್ರವಂತ್ಯೋಽಥ ಮರುದ್ಗಣಾಃ॥
ವಾಲಖಿಲ್ಯಾಸ್ತಪಃಸಿದ್ಧಾಃ ಕೃಷ್ಣದ್ವೈಪಾಯನಸ್ತಥಾ।
ನಾರದಃ ಪರ್ವತಶ್ಚೈವ ವಿಶ್ವಾವಸುರ್ಹಾಹಾಹುಹೂಃ॥
ತುಂಬುರುಶ್ಚಿತ್ರಸೇನಶ್ಚ ದೇವದೂತಶ್ಚ ವಿಶ್ರುತಃ। – ಮಹಾಭಾರತ (ಅ.ಪ/೧೬೫/೧೨,೧೩)
ಕೀರ್ತಿತಾನ್ ಕೀರ್ತಯಿಷ್ಯಾಮಿ ಸರ್ವಪಾಪಪ್ರಮೋಚನಾನ್।
ಯವಕ್ರೀತೋಽಥ ರೈಭ್ಯಶ್ಚ ಕಕ್ಷೀವಾನೌಶಿಜಸ್ತಥಾ॥

ಎಂಬುದಕ್ಕೆ ತಪ ಆಲೋಚನೇ ಎಂಬ ಧಾತು ಪಾಠದಿಂದ ಚಿಂತನಶೀಲರು, ಮನನಶೀಲರು ಎಂದು ಅರ್ಥವಾಗುವುದು; ಕೃಚ್ಛ್ರ ಚಾಂದ್ರಾಯಣ ಮೊದಲಾದ ವ್ರತಗಳ ಆಚರಣೆಗೂ ತಪಸ್ಸು ಎಂದು ಹೆಸರು: ಕೃಚ್ಛ್ರಚಾಂದ್ರಾಯಣಾದಿಕಂ ತಪಃ. ತಪಸ್ಸನ್ನು ಮಾಡಿ ವ್ರತ, ಉಪವಾಸವನ್ನು ಮಾಡಿ ಸಿದ್ಧಿ ಪಡೆದವರು ಎಂದು ಒಟ್ಟು ಅರ್ಥ.

3. ತಪಸ್ಸು ಎನ್ನುವುದಕ್ಕೆ ಮುಖ್ಯವಾಗಿ ಸ್ವಾಧ್ಯಾಯ ಪ್ರವಚನ ಎಂಬ ಅರ್ಥ ಉಪನಿಷತ್ತುಗಳಲ್ಲಿ ಬಂದಿದೆ: ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಸ್ತದ್ಧಿ ತಪಸ್ತದ್ಧಿ ತಪಃ (ತೈತ್ತಿರೀಯೋಪನಿಷತ್ತು). ಉಳಿದೆಲ್ಲ ತಪಸ್ಸುಗಳು ಒಂದೆಡೆಯಾದರೆ, ಸ್ವಾಧ್ಯಾಯ ಪ್ರವಚನ ಅವೆಲ್ಲವುಗಳನ್ನು ಮೀರಿಸುವ ಮಹಾತಪಸ್ಸು ಎಂದರ್ಥ. ಉಳಿದ ತಪಸ್ಸುಗಳು ಸಹ ತಪಸ್ಸು ಎನ್ನಿಸುವುದು ಸ್ವಾಧ್ಯಾಯ ಪ್ರವಚನಗಳ ಜೊತೆಗೆ ನಡೆದಾಗ ಮಾತ್ರವೇ ಎಂಬ ವಿಶೇಷಾಂಶವು ಸಹ ತೈತ್ತಿರೀಯೋಪನಿಷತ್ತಿನಲ್ಲಿಯೇ ನಿರೂಪಿತವಾಗಿದೆ. ವಿಶೇಷವಾಗಿ ಪಾಠ-ಪ್ರವಚನಗಳಲ್ಲಿ ತೊಡಗಿಸಿಕೊಂಡವರೇ ನಿಜವಾದ ಅರ್ಥದಲ್ಲಿ ತಪಸ್ವಿಗಳು ಎಂದು ಒಟ್ಟು ಭಾವ. ಇಲ್ಲಿ ಪ್ರಸ್ತಾಪಿತವಾಗಿರುವ ಋಷಿ-ಮುನಿಗಳು ಆ ಅರ್ಥದಲ್ಲಿ ಮಹಾತಪಸ್ವಿಗಳು ಎಂದು ತಿಳಿಯಬೇಕು.

---

ಭೃಗ್ವಂಗಿರಾಸ್ತಥಾ ಕಣ್ವೋ ಮೇಧಾತಿಥಿರಥ ಪ್ರಭುಃ।
ಬರ್ಹೀ ಚ ಗುಣಸಂಪನ್ನಃ ಪ್ರಾಚೀಂ ದಿಶಮುಪಾಶ್ರಿತಾಃ॥
ಭದ್ರಾಂ ದಿಶಂ ಮಹಾಭಾಗಾ ಉಲ್ಮುಚುಃ ಪ್ರಮುಚುಸ್ತಥಾ।
ಮುಮುಚುಶ್ಚ ಮಹಾಭಾಗಃ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್॥
ಮಿತ್ರಾವರುಣಯೋಃ ಪುತ್ರಸ್ತಥಾಽಗಸ್ತ್ಯಃ ಪ್ರತಾಪವಾನ್।
ದೃಢಾಯುಶ್ಚೋರ್ಧ್ವಬಾಹುಶ್ಚ ವಿಶ್ರುತಾವೃಷಿಸತ್ತಮೌ॥
ಪಶ್ಚಿಮಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್।
ಉಷಂಗುಃ ಸಹ ಸೋದರ್ಯೈಃ ಪರಿವ್ಯಾಧಶ್ಚ ವೀರ್ಯವಾನ್॥
ಋಷಿರ್ದೀರ್ಘತಮಾಶ್ಚೈವ ಗೌತಮಃ ಕಾಶ್ಯಪಸ್ತಥಾ।
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹಾನ್ ಋಷಿಃ॥
ಅತ್ರೇಃ ಪುತ್ರಶ್ಚ ಧರ್ಮಾತ್ಮಾ ತಥಾ ಸಾರಸ್ವತಃ ಪ್ರಭುಃ।
ಉತ್ತರಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್॥
ಅತ್ರಿರ್ವಸಿಷ್ಠಃ ಶಕ್ತಿಶ್ಚ ಪಾರಾಶರ್ಯಶ್ಚ ವೀರ್ಯವಾನ್।
ವಿಶ್ವಾಮಿತ್ರೋ ಭರದ್ವಾಜೋ ಜಮದಗ್ನಿಸ್ತಥೈವ ಚ॥
ಋಚೀಕಪುತ್ರೋ ರಾಮಶ್ಚ ಋಷಿರೌದ್ದಾಲಕಿಸ್ತಥಾ।
ಶ್ವೇತಕೇತುಃ ಕೋಹಲಶ್ಚ ವಿಪುಲೋ ದೇವಲಸ್ತಥಾ॥
ದೇವಶರ್ಮಾ ಚ ಧೌಮ್ಯಶ್ಚ ಹಸ್ತಿಕಾಶ್ಯಪ ಏವ ಚ।
ಲೋಮಶೋ ನಾಚಿಕೇತಶ್ಚ ಲೋಮಹರ್ಷಣ ಏವ ಚ॥
ಋಷಿರುಗ್ರಶ್ರವಾಶ್ಚೈವ ಭಾರ್ಗವಶ್ಚ್ಯವನಸ್ತಥಾ।
ಏಷ ವೈ ಸಮವಾಯಶ್ಚ ಋಷಿದೇವಸಮನ್ವಿತಃ॥ – ಮಹಾಭಾರತ (ಅ.ಪ/೧೬೫/೩೭-೪೭)

೪. **'ಋಷಿರ್ದರ್ಶನಾತ್'** ಎಂಬ ಮಾತಿನಿಂದ ವೇದಮಂತ್ರಗಳನ್ನು ದರ್ಶನ ಮಾಡುವ ಮಹನೀಯರು ಸಹ ಋಷಿಗಳು ಎನ್ನಿಸುವರು. ಅದರಂತೆ ೧೨ ಬಾರಿ ವೇದಪ್ರವಚನ ಮಾಡಿದವರು ಸಹ ಋಷಿಗಳೇ. ಈ ಅರ್ಥದಲ್ಲೂ ಇಲ್ಲಿ ಪ್ರಸ್ತಾಪಿತರಾಗಿರುವವರು ಋಷಿಗಳಾಗಿರುವರು. ವೇದಮಂತ್ರಗಳ ದರ್ಶನ ಸಾಧ್ಯವಾಗುವುದು ಜನ್ಮಜನ್ಮಗಳ ತಪಸ್ಸಿನಿಂದ ಮಾತ್ರ. ಆದ್ದರಿಂದ ಋಷಿಗಳು ತಪಸ್ವಿಗಳು ಎಂಬುದು ಅರ್ಥವತ್ತಾದ ಮಾತು.

೫. **'ವಿಶ್ವಾಮಿತ್ರ'**ಮುನಿ ಗಾಯತ್ರೀ ಮಂತ್ರದ ದ್ರಷ್ಟಾರರಾಗಿ ಲೋಕಮಾನ್ಯವಾಗಿರುವ ಮಹನೀಯರು. ಇವರು ಇಂದ್ರಾವತಾರನಾದ ಗಾಧಿ ಎಂಬ ಚಂದ್ರವಂಶದ ರಾಜನ ಪುತ್ರ; ರಾಜರ್ಷಿಯಾಗಿ ಅವತರಿಸಿದ ಇವರು ವಸಿಷ್ಠ ಮುನಿಗಳ ಅಗಾಧವಾದ ಮಂತ್ರಸಿದ್ಧಿಯನ್ನು ಕಂಡು ತಾವೂ ಸಹ ಬ್ರಾಹ್ಮಣ್ಯವನ್ನು ಸಂಪಾದಿಸಲೆಂದು ಹಠ ತೊಟ್ಟು ೪೦ ಸಾವಿರ ವರ್ಷಗಳಷ್ಟು ದೀರ್ಘಕಾಲ ತಪಸ್ಸು ಮಾಡಿ ಬ್ರಹ್ಮರ್ಷಿ ಎನಿಸಿಕೊಂಡ ಮಹನೀಯರು[೧].

೬. **'ಪರಾಶರ'**ಮುನಿ ಶಕ್ತಿ ಎಂಬ ಋಷಿಯ ಪುತ್ರ; ಶಕ್ತಿಯು ವಸಿಷ್ಠರ ಪುತ್ರ; ಪರಾಶರರ ಪುತ್ರತ್ವೇನ ಸಾಕ್ಷಾತ್ ಶ್ರೀಹರಿ ವೇದವ್ಯಾಸರೂಪದಿಂದ ಅವತರಿಸಿ ಅನನ್ಯ ಜ್ಞಾನಕಾರ್ಯ ಮಾಡಿದ ವಿಷಯ ವೇದೇತಿಹಾಸಪುರಾಣಗಳಲ್ಲಿ ಸುಪ್ರಸಿದ್ಧ. ತಮಗೆ ಶ್ರೀಹರಿಯು ಪುತ್ರನಾಗಬೇಕು ಎಂದು ಇವರು ತಪಸ್ಸು ಮಾಡಿದ್ದರಿಂದ ಇವರಿಗೆ ಶ್ರೀವೇದವ್ಯಾಸರ ತಂದೆ ಎನಿಸುವ ಸೌಭಾಗ್ಯ ಲಭಿಸಿತು. ಪರಾಶರರಿಗೆ ಸತ್ಯವತಿಯಲ್ಲಿ ಪುತ್ರತ್ವೇನ ಪ್ರಾದುರ್ಭೂತರಾದವರು ಶ್ರೀವೇದವ್ಯಾಸರು. ಸತ್ಯವತಿಯು ಅಚ್ಛೋದಾ ಎಂಬ ಒಬ್ಬ ಪಿತೃಕನ್ಯೆಯ ಅವತಾರ.

೭. **'ಔರ್ವ'** ಎಂಬವರು ಮತ್ತೊಬ್ಬ ಶ್ರೇಷ್ಠರಾದ ಮುನಿ. ಚ್ಯವನ ಹಾಗೂ ಆರುಷಿ ಎಂಬವರ ಪುತ್ರ. ಆರುಷಿಯು ಮನುವಿನ ಪುತ್ರಿ. ತಾಯಿಯು ಶತ್ರುಗಳ ಭಯದಿಂದ ತನ್ನ ತೊಡೆಯಲ್ಲಿ ಅಡಗಿಸಿಕೊಂಡಿದ್ದ ಗರ್ಭದಿಂದ ಹುಟ್ಟಿದ್ದರಿಂದ ಇವರಿಗೆ ಔರ್ವ ಎಂದು ಹೆಸರು. ಇವರು ತಮ್ಮ ನೋಟ ಮಾತ್ರದಿಂದಲೇ ಶತ್ರುಗಳಾದ ಕಾರ್ತವೀರ್ಯಾರ್ಜುನನ ಪುತ್ರ ವೃಂದನನ್ನು ಸುಟ್ಟುಹಾಕಿದರು. ಪುನಃ ಬದುಕಿದ್ದ ಕಾರ್ತವೀರ್ಯಾರ್ಜುನನ ಪುತ್ರರ ಪ್ರಾರ್ಥನೆಯನ್ನು ಮನ್ನಿಸಿ ಆಗ ಅವರನ್ನೆಲ್ಲ ಬದುಕಿಸಿದರು. ಇವರ ಕೋಪಾಗ್ನಿಯೇ ಔರ್ವಾಗ್ನಿ ಎನ್ನಿಸಿ ಸಮುದ್ರದಲ್ಲಿ ಬಡವಾನಲದ ರೂಪವನ್ನು ತಾಳಿತು.

೮. **'ಭೃಗು'** ಮುನಿ ಮಹರ್ಷಿಗಳಲ್ಲಿ ಶ್ರೇಷ್ಠ ಎನ್ನಿಸಿದವರು. ಇವರಲ್ಲಿ ಭೃಗು ನಾಮಕ ಭಗವಂತನ ವಿಭೂತಿ ರೂಪವಿದೆ ಎಂಬ ವಿವರ ಭಗವದ್ಗೀತೆಯಲ್ಲಿದೆ: ಮಹರ್ಷೀಣಾಂ

---

೧. ತತಃ ಸುವಂಶೇ ಶಶಿನಃ ಪ್ರಸೂತೋ ಗಾಧೀತಿ ಶಕ್ರಸ್ತನಯೋಽಸ್ಯ ಚಾಸೀತ್ ।
ವರೇಣ ವಿಪ್ರತ್ವಮವಾಪ ಯೋಽಸೌ ವಿಶ್ವಸ್ಯ ಮಿತ್ರಂ ಸ ಇಹಾಜಗಾಮ ॥ – ಮ.ಭಾ.ತಾ.ನಿ ೪/೪

ಭೃಗುರಹಮ್. ಸರಸ್ವತೀ ತೀರದಲ್ಲಿ ಕಶ್ಯಪಾದಿಗಳು ಯಜ್ಞ ನಿರತರಾಗಿದ್ದಾಗ ಶ್ರೀನಾರದಮುನಿಗಳ ಆದೇಶದಂತೆ ತ್ರಿಮೂರ್ತಿಗಳ ಲೋಕಗಳಿಗೆ ತೆರಳಿ ವಿಷ್ಣುವೇ ಸರ್ವೋತ್ತಮ ಎಂಬುದನ್ನು ಲೋಕಕ್ಕೆ ಸಾರಿದ ಹಿರಿಮೆ ಇವರದು. ಶ್ರೀಹರಿಯ ವಕ್ಷಸ್ಥಳಕ್ಕೆ ಪಾದಪ್ರಹಾರ ಮಾಡಿದ ದೋಷದಿಂದ ಜರಾ ಎಂಬ ಬೇಡನಾಗಿ ಜನಿಸಿ ಶ್ರೀಕೃಷ್ಣನ ಪಾದಕ್ಕೆ ಬಾಣ ಪ್ರಹಾರ ಮಾಡಿ ಮುಂದೆ ಅವನ ಅನುಗ್ರಹಕ್ಕೆ ಪಾತ್ರರಾಗಿ ಸ್ವರ್ಗ ಪಡೆದವರು. ಕರ್ದಮ ದೇವಹೂತಿಯರ ಪುತ್ರಿಯಾದ 'ಖ್ಯಾತಿ' ಎಂಬವಳು ಭೃಗುಮುನಿಗಳ ಪತ್ನಿ. ಭೃಗುಮುನಿಗಳು ಖ್ಯಾತಿಯಲ್ಲಿ ಧಾತೃ, ವಿಧಾತೃ ಎಂಬ ಇಬ್ಬರು ಪುತ್ರರನ್ನೂ, ಸಾಕ್ಷಾತ್ [೧]ಮಹಾಲಕ್ಷ್ಮಿಯನ್ನೂ ಮಕ್ಕಳನ್ನಾಗಿ ಪಡೆದರು. ಆಯತಿ, ನಿಯತಿ ಎಂಬ ಮೇರುವಿನ ಮಕ್ಕಳು ಇವರ ಇಬ್ಬರು ಸೊಸೆಯಂದಿರು. ಅದರಲ್ಲಿ ಧಾತೃವಿನ ಮಗ ಮೃಕಂಡು; ಅವರ ಪುತ್ರರೇ ಚಿರಂಜೀವಿಗಳಲ್ಲಿ ಒಬ್ಬರೆಂದು ಖ್ಯಾತರಾದ ಮಾರ್ಕಂಡೇಯ ಮುನಿ. ಶ್ರೀಪರಶುರಾಮ ರೂಪದಿಂದ ಶ್ರೀಹರಿ ಅವತರಿಸಿದ್ದು ಇವರ ವಂಶದಲ್ಲಿ. ಅದಕ್ಕೆಂದೇ ಆ ರೂಪಕ್ಕೆ ಭಾರ್ಗವರಾಮ ಎಂದು ಹೆಸರು.

೯. **'ಅಗಸ್ತ್ಯ'**ಮುನಿ ಕುಂಭಸಂಭವ ಎಂಬುದಾಗಿ ಪ್ರಸಿದ್ಧರಾದವರು. ಮುಂದೆ ಇವರು ಸಮುದ್ರದಲ್ಲಿ ಅಡಗಿದ ದೈತ್ಯರ ಸಂಹಾರಕ್ಕೆ ದೇವತೆಗಳಿಗೆ ಅನುಕೂಲವಾಗಲೆಂದು ಸಮುದ್ರವನ್ನೇ ಪಾನ ಮಾಡಿದ ಮಹನೀಯರು. ಲೋಪಾಮುದ್ರೆ ಇವರ ಪತ್ನಿ. ವಿಂಧ್ಯ ಪರ್ವತದ ಬೆಳವಣಿಗೆಯನ್ನೂ ಸಹ ಕೌಶಲದಿಂದ ತಡೆದ ಮತ್ತೊಂದು ಹಿರಿಮೆಯೂ ಇವರದೇ ಆಗಿದೆ. ಲೋಪಾಮುದ್ರೆ ಇವರ ಪತ್ನಿ. ತೀರ್ಥಪ್ರಬಂಧದಲ್ಲಿ ಇವರ ಉಲ್ಲೇಖ ಬಂದಿದೆ:

ಅಗಸ್ತ್ಯೋ ಮುನಿಶಾರ್ದೂಲೋ ಭವಾಬ್ಧೇರ್ನಃ ಸಮುದ್ಧರೇತ್ ।
ಚುಲಕೀಕೃತಗಂಭೀರಜೃಂಭಿತಾಂಭೋಧಿಡಂಬರಃ ॥ – (೪/೩೫)

೧೦. **'ಪುಲಸ್ತ್ಯ'**ಮುನಿ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಹವಿರ್ಭೂ ಎಂಬ ಕರ್ದಮ ದೇವಹೂತಿಯರ ಪುತ್ರಿ ಇವರ ಪತ್ನಿ. ಅಗಸ್ತ್ಯ ಮುನಿ ಇವರಿಬ್ಬರ ಪುತ್ರ. ಇನ್ನೊಂದು ಜನ್ಮದಲ್ಲಿ ವಿಶ್ರವಸ್ ಇವರ ಪುತ್ರ. ವಿಶ್ರವಸ್ಸಿನ ಒಬ್ಬ ಪುತ್ರ ವೈಶ್ರವಣ ಎನ್ನಿಸಿರುವ ಕುಬೇರ. ರಾವಣ-ಕುಂಭಕರ್ಣ-ವಿಭೀಷಣರು ಕೇಕಸೀ ಎಂಬವಳಲ್ಲಿ ಜನಿಸಿದ ಇವರ ಪುತ್ರರು. ಇವರು ತಪಸ್ಸು ಮಾಡಿ ವಿಶೇಷಸಿದ್ಧಿ ಗಳಿಸಿದ ಸ್ಥಳ ವೇಂಕಟಗಿರಿಯ ಸ್ವಾಮಿಪುಷ್ಕರಣೀ ಸರೋವರ.

---

೧. ಮಹಾಲಕ್ಷ್ಮಿಯು ಒಂದು ರೂಪದಿಂದ ಭೃಗು ವಂಶದಲ್ಲಿ ಅವತರಿಸಿದ್ದರಿಂದ ಅವರಿಗೆ ಭಾರ್ಗವೀ ಎಂದು ಹೆಸರು.

೧೧. '**ಕ್ರತು**' ಮುನಿ ಸಹ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಕ್ರಿಯಾ ಎಂಬ ಕರ್ದಮ-ದೇವಹೂತಿಯರ ಪುತ್ರಿ ಇವರ ಪತ್ನಿ. ಇವರಿಬ್ಬರ ಪುತ್ರರೇ ವಾಲಖಿಲ್ಯರು ಎಂಬ ೬೦೦೦೦ ಜನ ಋಷಿಗಳು; ಪ್ರತಿಸಂಧ್ಯಾಕಾಲದಲ್ಲಿ ಸೂರ್ಯಾರ್ಘ್ಯವನ್ನು ನೀಡುತ್ತಾ ಸೂರ್ಯನ ಗತಿಗೆ ಅಡ್ಡಿಯನ್ನುಂಟುಮಾಡುವ ಮಂದೇಹರೆಂಬ ರಾಕ್ಷಸರನ್ನು ನಾಶಮಾಡುವ ಕಾರ್ಯ ಇವರದಾಗಿದೆ.

೧೨. '**ಶ್ರೀಮಾನ್**' ಎಂಬುದಕ್ಕೆ ಸಕಲ ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ಯುಕ್ತರಾದ ವಿಶೇಷ ಸಾಧಕರು ಎಂಬ ವಿಶೇಷಾರ್ಥ ಐತರೇಯೋಪನಿಷತ್ತು ಹಾಗೂ ಅದರ ಭಾಷ್ಯದಿಂದ ತಿಳಿಯುವುದು[೧]. ಇದು ಇಲ್ಲಿ ಪ್ರಸಕ್ತರಾಗಿರುವ ಸಕಲ ಋಷಿಗಳಿಗೂ ಅನ್ವಯಿಸುವ ವಿಶೇಷಣ ಎಂದು ತಿಳಿಯಬೇಕು.

೧೩. '**ಅತ್ರಿ**' ಮುನಿ ಸಹ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಇವರ ಪತ್ನಿ ಕರ್ದಮ-ದೇವಹೂತಿಯರ ಪುತ್ರಿ ಅನಸೂಯಾ. ಇವರು ಋಕ್ಷ ಎಂಬ ಪರ್ವತದಲ್ಲಿ ೩೬ ಸಾವಿರ ವರ್ಷಗಳಷ್ಟು ದೀರ್ಘಕಾಲ ಮಾಡಿದ ದಿವ್ಯ ತಪಸ್ಸಿನ ಫಲವಾಗಿ ದತ್ತಾತ್ರೇಯ, ಚಂದ್ರ ಹಾಗೂ ದೂರ್ವಾಸರು ಎಂಬ ಮೂವರು ಪುತ್ರರನ್ನು ಪಡೆದರು. ಇವರಲ್ಲಿ ದತ್ತಾತ್ರೇಯ ಸಾಕ್ಷಾತ್ ಮಹಾವಿಷ್ಣು, ಚಂದ್ರನಲ್ಲಿ ಬ್ರಹ್ಮದೇವರ ಸನ್ನಿಧಾನ, ದೂರ್ವಾಸರು ಶಿವನ ಅವತಾರ. ೩ ಮುಖ, ೬ ಕೈಗಳ ದತ್ತಾತ್ರೇಯ ಅತ್ರಿ ಮುನಿಯ ಪುತ್ರತ್ವೇನ ಅವತರಿಸಿದ ತ್ರಿಮೂರ್ತಿಗಳ ಐಕ್ಯ ಸಾರುವ ರೂಪ ಎಂಬ ಕೆಲವರ ಕಲ್ಪನೆ ಶ್ರೀಮದ್ಭಾಗವತಾದಿ ಪುರಾಣಗಳಿಗೆ ವಿರುದ್ಧವಾದುದು. ಚಂದ್ರವಂಶ ಪ್ರವರ್ತಕನಾದ ಚಂದ್ರ ಇವರ ತಪಸ್ಸಿನ ಫಲವಾಗಿ ಅವರ ಆನಂದಾಶ್ರುಗಳಿಂದ ಜನಿಸಿದ. ಹೀಗೆ ಚಂದ್ರವಂಶದಲ್ಲೂ ಅತ್ರಿ ಮುನಿಗಳ ಪಾತ್ರ ಗಮನಾರ್ಹವಾಗಿದೆ.

೧೪. '**ಮರೀಚಿ**' ಮುನಿ ಸಹ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಕರ್ದಮ-ದೇವಹೂತಿಯರ ಪುತ್ರಿ ಕಲಾ ಇವರ ಪತ್ನಿ. ಇವರ ಪುತ್ರ ಕಶ್ಯಪ ಮುನಿ. ಅವರಿಗೆ ದಕ್ಷ ಪುತ್ರಿಯರಲ್ಲಿ ಬಗೆಬಗೆಯ ಸಂತತಿ ಹುಟ್ಟಿತು. ದಿತಿಯಲ್ಲಿ ದೈತ್ಯರು, ಅದಿತಿಯಲ್ಲಿ ದೇವತೆಗಳು, ದನುವಿನಲ್ಲಿ ದಾನವರು ಮೊದಲಾಗಿ ಇವರ ವಂಶ ಬೆಳೆಯಿತು. ಹೀಗೆ ಪ್ರಜಾಸೃಷ್ಟಿಯಲ್ಲಿ ಕಶ್ಯಪರ ಪಾತ್ರ ಮಹತ್ತರವಾದುದು.

೧೫. '**ಕೌತ್ಸ**' ಮುನಿ ವಿಶ್ವಾಮಿತ್ರ ಮುನಿಯ ಶಿಷ್ಯ. ಇವರ ವಿಶೇಷ ಸೇವೆಗೆ ಮೆಚ್ಚಿ ವಿಶ್ವಾಮಿತ್ರರು ಹೆಚ್ಚಿನ ಅನುಗ್ರಹವನ್ನು ಮಾಡಿದರು. ಇಲ್ಲಿ ಕೌತ್ಸ ಎಂಬುದಕ್ಕೆ ಉಚಥ್ಯ

---

೧. ತಚ್ಛಿರೋಽಶ್ರಯತ ಯಚ್ಛಿರೋಽಶ್ರಯತ ತಚ್ಛಿರೋಽಭವತ್ ತಚ್ಛಿರಸಃ ಶಿರಸ್ತ್ವಮ್ । ತಾ ಏತಾಃ ಶೀರ್ಷಂಚ್ಛ್ರಿಯಃ ಶ್ರಿತಾಶ್ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ ಶ್ರಯಂತೇ ಅಸ್ಮಿಂಚ್ಛ್ರಿಯೋ ಯ ಏವಮೇತಚ್ಛಿರಸಃ ಶಿರಸ್ತ್ವಂ ವೇದ। – ಐತರೆಯೋಪನಿಷತ್ತು (೧/೩)

ಎಂಬ ಪಾಠಾಂತರವೂ ಇದೆ. ಉಚಥ್ಯರು ಅಂಗಿರಸರ ಪುತ್ರ ಹಾಗು ಬೃಹಸ್ಪತಿಯ ಅಣ್ಣ.

೧೬. **'ಪುಲಹ'** ಮುನಿ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಕರ್ದಮ-ದೇವಹೂತಿಯರ ಪುತ್ರಿ ಗತಿ ಎಂಬವಳು ಇವರ ಪತ್ನಿ. ಅವರಿಗೆ ಕರ್ಮಶ್ರೇಷ್ಠ ವರೀಯಾನ್ ಮತ್ತು ಸಹಿಷ್ಣು ಎಂಬ ಮೂವರು ಮಕ್ಕಳು. ಇವರ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಚಕ್ರಾನದಿಯ ತೀರದ ಪುಲಹಾಶ್ರಮ ಎಂಬ ಸ್ಥಳದಲ್ಲಿಯೇ ಭರತ ರಾಜ ತಪೋನಿರತನಾಗಿದ್ದ ವಿವರ ಶ್ರೀಮದ್ಭಾಗವತಪುರಾಣದಲ್ಲಿ ಬಂದಿದೆ.

೧೭. **'ಶಕ್ತಿ'** ಮುನಿ ವಸಿಷ್ಠರ ಪುತ್ರ; ಪರಾಶರರ ತಂದೆ. ವಸಿಷ್ಠರ ನೂರು ಪುತ್ರರಲ್ಲಿ ಶಕ್ತಿಯೇ ಜ್ಯೇಷ್ಠ ಇವರ ಪತ್ನಿ ಅದೃಶ್ಯಂತೀ ಎಂಬವಳಲ್ಲಿ ಪರಾಶರರ ಜನನವಾಯಿತು.

೧೮. **'ವಸಿಷ್ಠ'**ಮುನಿ ಶಕ್ತಿ ಮುನಿಯ ತಂದೆ ಹಾಗೂ ಸೂರ್ಯವಂಶದ ಕುಲ-ಪುರೋಹಿತರು. ಕರ್ದಮ-ದೇವಹೂತಿಯರ ಪುತ್ರಿ ಅರುಂಧತಿ ಇವರ ಪತ್ನಿ. ಇವರ ವಂಶದಲ್ಲಿಯೇ ಮುಂದೆ ಶ್ರೀವೇದವ್ಯಾಸರೂಪದ ಶ್ರೀಹರಿಯ ಅವತಾರವಾಯಿತು. ಆದಕ್ಕಾಗಿ ಅವರಿಗೆ ವಾಸಿಷ್ಠಕೃಷ್ಣ ಎಂದು ಹೆಸರಿದೆ. ಬ್ರಹ್ಮರ್ಷಿಗಳಲ್ಲಿ ಅಗ್ರೇಸರರು ಎನ್ನಿಸಿರುವುದು ಇವರ ಹಿರಿಮೆ. ತಮ್ಮ ಬಳಿ ಇದ್ದ ಕಾಮಧೇನುವಿನಿಂದ ಇವರು ವಿಶ್ವಾಮಿತ್ರ ಹಾಗೂ ಅವರ ಅಸಂಖ್ಯ ಪರಿವಾರಕ್ಕೆ ಮಾಡಿದ ಆತಿಥ್ಯ ಲೋಕವಿಖ್ಯಾತವಾದುದು. ಅತ್ಯಂತ ಶಾಂತಸ್ವಭಾವಕ್ಕೆ ಇವರು ತುಂಬಾ ಪ್ರಸಿದ್ಧರು. ತಮ್ಮ ನೂರು ಮಕ್ಕಳನ್ನು ವಿಶ್ವಾಮಿತ್ರರು ಸಂಹರಿಸಿದರೂ ಸಹ ಕೋಪಗೊಳ್ಳದ ವಿಶಿಷ್ಟವಾದ ಶಾಂತ ಪ್ರವೃತ್ತಿ ಇವರದು.

೧೯. **'ಅಂಗಿರಸ'** ಮುನಿ ಸಹ ಬ್ರಹ್ಮದೇವರ ಮಾನಸಪುತ್ರರಾದ ಸಪ್ತರ್ಷಿಗಳಲ್ಲಿ ಒಬ್ಬರು. ಕರ್ದಮ-ದೇವಹೂತಿಯರ ಪುತ್ರಿ ಶ್ರದ್ಧಾ ಎಂಬವಳು ಇವರ ಪತ್ನಿ. ಅಂಗಿರಸರಿಗೆ ಸಿನೀವಾಲೀ, ಕುಹೂ, ರಾಕಾ ಮತ್ತು ಅನುಮತಿ ಎಂಬ ನಾಲ್ವರು ಪುತ್ರಿಯರು. ಸ್ವಾರೋಚಿಷ ಮನ್ವಂತರದಲ್ಲಿ ಇವರಿಗೆ ಖ್ಯಾತಿ ಎಂಬವಳಲ್ಲಿ ಉಚಥ್ಯ ಹಾಗೂ ಬೃಹಸ್ಪತಿ ಎಂಬ ಇಬ್ಬರು ಪುತ್ರರು. ಬೃಹಸ್ಪತಿಯ ಪುತ್ರ ಭಾರದ್ವಾಜರು; ತನ್ನ ಮಗನಿಗೆ ಮಗನಾಗಿ ಜನಿಸಿದ್ದು ವಿಶೇಷ. ಭಾಗವತಶಿರೋಮಣಿಗಳಲ್ಲಿ ಒಬ್ಬನಾದ ಉದ್ಧವ ಬೃಹಸ್ಪತಿಯ ಮತ್ತೊಂದು ಅವತಾರ.

೨೦. **'ಮಾಂಡವ್ಯ'**ಮುನಿ ವಸಿಷ್ಠಮುನಿಯ ಸಾಮ್ಯವನ್ನು ಬಯಸಿ ಮಾಡಿದ ತಪಸ್ಸು ಅವರ ಯೋಗ್ಯತೆಗೆ ನಿಲುಕದ ಸಿದ್ಧಿಯನ್ನು ಕುರಿತಾಗಿತ್ತು. ಆದರಿಂದಾಗಿ ಅವರ ತಪಸ್ಸಿಗೆ

ವಿಘ್ನವುಂಟಾಗಿ ಮುಂದೆ ಅಣಿಮಾಂಡವ್ಯರು ಎಂದು ಖ್ಯಾತರಾದರು. ಯಮನು ವಿದುರನಾಗಿ ಜನಿಸಲು ಇವರ ಶಾಪವೊಂದು ನಿಮಿತ್ತವಾಯಿತು.

೨೧. '**ಜಮದಗ್ನಿ**' ಮುನಿ ಋಚೀಕ ಎಂಬ ಮುನಿಗಳ ಪುತ್ರ. ಇವರ ಪತ್ನಿ ರೇಣು ಎಂಬ ಮುನಿಯ ಪುತ್ರಿಯಾದ ರೇಣುಕೆ. ಪರಶುರಾಮರೂಪದ ಶ್ರೀಹರಿ ಇವರ ಪುತ್ರತ್ವೇನ ಅವತರಿಸಿದ. ಅದಕ್ಕಾಗಿ ಜಾಮದಗ್ನ್ಯ ಎಂಬ ಹೆಸರೂ ಆ ರೂಪಕ್ಕಿದೆ. ಇವರ ಬಳಿಯು ಸಹ ಕಾಮಧೇನು ಇದ್ದು ಅದರ ಸಹಕಾರದಿಂದ ಕಾರ್ತವೀರ್ಯಾರ್ಜುನ ಹಾಗೂ ಅವನ ಪರಿವಾರಕ್ಕೆ ಅದ್ಭುತವೆನ್ನಿಸುವ ಆತಿಥ್ಯ ಮಾಡಿದ ಕೀರ್ತಿ ಇವರದು. ಮುಂದೆ ಕಾರ್ತವೀರ್ಯಾರ್ಜುನ ಇವರ ಧೇನುವನ್ನು ಅಪಹರಿಸಿದಾಗ ಪರಶುರಾಮ ಕಾರ್ತವಿರ್ಯಾರ್ಜುನನನ್ನು ಸಂಹರಿಸಿ ಅದನ್ನು ಪುನಃ ತಂದು ನೀಡಿದ. ತಮ್ಮ ಪತ್ನಿ ರೇಣುಕೆ ಹಾಗೂ ಪುತ್ರರನ್ನು ಸಂಹರಿಸಲು ಪರಶುರಾಮ ದೇವರಿಗೆ ಹೇಳಿದಾಗ ಅವರು ಹಾಗೆಯೇ ಮಾಡಿ ಪುನಃ ಅವರನ್ನು ಬದುಕಿಸಿ ಅವರೆಲ್ಲರ ಉದ್ಧಾರಕ್ಕೆ ಕಾರಣರಾದರು. ಮುಂದೆ ಕಾರ್ತವೀರ್ಯಾರ್ಜುನನ ಮಕ್ಕಳು ಇವರನ್ನು ಸಂಹರಿಸಿ ಇವರ ತಲೆಯನ್ನು ಕದ್ದೊಯ್ದಾಗ ಪರಶುರಾಮ ಅವರೆಲ್ಲರನ್ನು ಸಂಹರಿಸಿದರು. ತಮ್ಮ ತಂದೆಯ ತಲೆಯನ್ನು ತಂದು ಪುನಃ ಜೋಡಿಸಿ, ಬದುಕಿಸಿ ಅವರನ್ನು ಈ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬರನ್ನಾಗಿ ಮಾಡಿದರು.

೨೨. '**ಗೌತಮ**' ಮುನಿ ಈ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬರು. ಮಹಾತಪಸ್ವಿಗಳು ಎಂಬುದಾಗಿ ಖ್ಯಾತರಾಗಿದ್ದ ಇವರ ಆಶ್ರಮದಲ್ಲಿ ದ್ವಾಪರಯುಗದ ಕೊನೆಯಲ್ಲಿ ಒದಗಿದ್ದ ಒಂದು ಭೀಕರ ಬರಗಾಲದ ಕಾಲದಲ್ಲಿ ಇತರ ಮುನಿಗಳು ಆಶ್ರಯ ಪಡೆದಿದ್ದರು. ಆ ಪ್ರಸಂಗದಲ್ಲಿ ಗೌತಮರು ಆ ಋಷಿಗಳಿಗೆ ನೀಡಿದ ಶಾಪದ ಕಾರಣದಿಂದ ಜ್ಞಾನವು ನಾಶವಾಗುವಂತಾಯಿತು. ಮುಂದೆ ಅದು ವ್ಯಾಸಾವತಾರಕ್ಕೆ ಕಾರಣವಾಯಿತು. ಗಂಗೆಯ ಮತ್ತೊಂದು ಕವಲು ಎನ್ನಿಸಿದ ಗೋದಾವರೀ ನದಿಯು ಇವರ ತಪಸ್ಸಿನ ಫಲ. ಅದಕ್ಕಾಗಿಯೇ ಗೌತಮೀ ಎಂಬ ಹೆಸರೂ ಅದಕ್ಕಿದೆ. ಗೌತಮರ ಪತ್ನಿ ಅಹಲ್ಯೆ; ಜನಕರಾಜನ ಗುರುಗಳಾದ ಶತಾನಂದರು ಈ ದಂಪತಿಗಳ ಪುತ್ರರು.

೨೩. '**ಭರದ್ವಾಜ**' ಮುನಿ ಬೃಹಸ್ಪತ್ಯಾಚಾರ್ಯರ ಪುತ್ರರಾದ ಮಹರ್ಷಿ. ದ್ರೋಣಾಚಾರ್ಯರು ಇವರ ಪುತ್ರ. ದ್ರೋಣಾಚಾರ್ಯರು ಯುದ್ಧದಿಂದ ನಿವೃತ್ತರಾಗುವಂತೆ ಮಾಡುವಲ್ಲಿ ಭೀಮಸೇನನದು ಪ್ರಮುಖ ಪಾತ್ರ. ಆ ಸಮಯದಲ್ಲಿ ತಮ್ಮ ಅವತಾರ ಕಾರ್ಯ ಮುಗಿಸಲು ಸೂಚನೆ ನೀಡಿದ ಋಷಿಮುನಿಗಳಲ್ಲಿ ಭರದ್ವಾಜರೂ ಸೇರಿದ್ದರು.

೨೪. '**ಆದಯಃ**' ಎಂಬ ಪದದಿಂದ ಇವರು ಮಾತ್ರವಲ್ಲದೇ, ಇವರಂತೆ ಮಹಾತಪಸ್ವಿಗಳೆನ್ನಿಸಿದ ನಾರದ (ದೇವರ್ಷಿ), ಕಶ್ಯಪ (ಬ್ರಹ್ಮರ್ಷಿ) ಮೊದಲಾದ ಸಕಲ ಋಷಿಮುನಿಗಳು ಸಹ ನಮಗೆ ಮಂಗಲವನ್ನುಂಟು ಮಾಡಲಿ ಎಂದು ಪ್ರಾರ್ಥಿಸಿಕೊಳ್ಳಬೇಕು. ಮುಕ್ತಿ ಪ್ರಾಪ್ತಿಗೆ ಮುಖ್ಯಸಾಧನ ಶ್ರೀಹರಿಯ ಅನುಗ್ರಹವಾದರೆ, ಅಂತಹ ಶ್ರೀಹರಿಯ ಅನುಗ್ರಹ ಲಭಿಸಲು ತಾರತಮ್ಯ ಕ್ರಮದಲ್ಲಿ ದೇವತಾ ಭಕ್ತಿ ಹಾಗೂ ಗುರುಭಕ್ತಿ ಅತ್ಯಾವಶ್ಯಕ. ಆದ್ದರಿಂದ ಗುರುಗಳ ಸಾಲಿಗೆ ಸೇರುವ ಈ ಋಷಿಮುನಿಗಳ ಸ್ಮರಣೆ ಪ್ರತಿನಿತ್ಯದ ಕರ್ತವ್ಯ ಎಂದರ್ಥ; ಋಷಿಗಳಲ್ಲಿ ದೇವರ್ಷಿ, ಮಹರ್ಷಿ, ಬ್ರಹ್ಮರ್ಷಿಗಳಂತೆ ಪರಮರ್ಷಿ, ಕಾಂಡರ್ಷಿ, ಶ್ರುತರ್ಷಿ, ರಾಜರ್ಷಿ ಎಂಬವರು ಸಹ ಇರುವರು.

೨೫. '**ತಾಪಸಾಃ**'[೧] ಎಂದರೆ ತಪಸ್ವಿಗಳು ಎಂದರ್ಥ. ಋಷಿಮುನಿಗಳು ಮೊದಲಾದವರೆಲ್ಲ ಈ ತಪಸ್ವಿಗಳ ಸಾಲಿಗೆ ಸೇರುವರು.

೨೬. ವಿಶ್ವಾಮಿತ್ರಾದಿಗಳಂತೆ ಇತರ ಅನೇಕ ಋಷಿಗಳು ನಮ್ಮ ಪರಂಪರೆಯ ಶ್ರೀಪದ್ಮನಾಭತೀರ್ಥರು, ಶ್ರೀಜಯತೀರ್ಥರು, ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀರಘೂತ್ತಮರು, ಶ್ರೀರಾಘವೇಂದ್ರಸ್ವಾಮಿಗಳು ಮೊದಲಾದ ಸಕಲ ಯತಿಶೇಖರರು, ಶ್ರೀತ್ರಿವಿಕ್ರಮಪಂಡಿತಾಚಾರ್ಯರು, ಶ್ರೀನಾರಾಯಣಪಂಡಿತಾಚಾರ್ಯರು, ಶ್ರೀಯದುಪತ್ಯಾಚಾರ್ಯರು, ಶ್ರೀಬಿದರಹಳ್ಳಿ ಶ್ರೀನಿವಾಸಾಚಾರ್ಯರು, ಶ್ರೀಲಕ್ಷ್ಮೀನಾರಾಯಣಾಚಾರ್ಯರು ಮೊದಲಾದ ಗೃಹಸ್ಥವರೇಣ್ಯರು; ಶ್ರೀಪುರಂದರದಾಸರು, ಶ್ರೀಕನಕದಾಸರು, ಶ್ರೀವಿಜಯದಾಸರು, ಶ್ರೀಗೋಪಾಲದಾಸರು, ಶ್ರೀಜಗನ್ನಾಥದಾಸರು ಮೊದಲಾದ ದಾಸವರೇಣ್ಯರು - ಮೊದಲಾದ ಗುರುಪರಂಪರೆಯ ಜ್ಞಾನಿಗಳೆಲ್ಲರೂ ಸಹ ಇಲ್ಲಿ ಆದಿ ಶಬ್ದದಿಂದ ಗೃಹೀತ ಎಂದು ತಿಳಿಯಬಹುದು.

೨೭. ಇಲ್ಲಿ ಸಹ ದೇವತೆಗಳ ಬಗ್ಗೆ ತಿಳಿಸಿದಂತೆ **ಸಸ್ತ್ರೀಕಾಃ** ಎಂಬ ಪದವನ್ನು ಅನ್ವಯಿಸಿಕೊಳ್ಳಬೇಕು. ಎಂದರೆ ಇವರನ್ನು ಸಹ ಅವರ ಪತ್ನಿಯರ ಸಮೇತರಾಗಿ ಸ್ತುತಿಸಬೇಕು ಎಂದರ್ಥ.

೨೮. ಋಷಿಗಳ ಆರಾಧನೆಯಿಂದ ದುಃಖವನ್ನು ಪರಿಹರಿಸಿಕೊಳ್ಳಲು ಸಾಧ್ಯ ಎಂಬ ವಿಶೇಷ ವಿವರವು ದ್ವಾದಶಸ್ತೋತ್ರದಲ್ಲಿ ನಿರೂಪಿತವಾಗಿದೆ:

---

೧. 'ತಪಸ್ವೀ ತಾಪಸಃ ಪಾರಿಕಾಂಕ್ಷೀ' – ಇತ್ಯಮರಃ।
ತಪಸ್ವೀ ತಾಪಸೇ ಜಾನುಕಂಪೇ ತ್ರಿಷ್ವಥ। – ಇತಿ ಮೇದಿನೀ.
ತಪೋ ಅಸ್ಯಾಸ್ತೀತಿ **ತಾಪಸಃ**। 'ತಪಃ ಸಹಸ್ರಾಭ್ಯಾಂ' (– ೫/೨/೧೦೨) – ಇತಿ ಏಣಿಃ – ವ್ಯಾ.

ಷಡ್ವರ್ಗನಿಗ್ರಹನಿರಸ್ತಸಮಸ್ತದೋಷಾ
ಧ್ಯಾಯಂತಿ ವಿಷ್ಣುಮೃಷಯೋ ಯದಪಾಂಗಲೇಶಮ್ ।
ಆಶ್ರಿತ್ಯ ಯಾನಪಿ ಸಮೇತ್ಯ ನ ಯಾತಿ ದುಃಖಂ
ಶ್ರೀರ್ಯತ್ಕಟಾಕ್ಷಬಲವತ್ಯಜಿತಂ ನಮಾಮಿ ॥

೨೯. ಋಷಿಗಳಿಂದ ಲಭಿಸುವುದು ಜ್ಞಾನ. ಪಂಚಮಹಾಯಜ್ಞಗಳಲ್ಲಿ ಒಂದಾದ ಬ್ರಹ್ಮಯಜ್ಞ ಈ ಋಷಿಗಳ ಆರಾಧನೆಯೇ ಆಗಿದೆ.

೩೦. ವಿಶ್ವಾಮಿತ್ರರಿಂದ ಗಾಯತ್ರೀಮಂತ್ರ ಜಪದ ದೀಕ್ಷೆ; ಪರಾಶರರಿಂದ ವೇದವ್ಯಾಸರ ಗ್ರಂಥಗಳ ಅಧ್ಯಯನ; ಭೃಗುಮುನಿಗಳಿಂದ ಸರ್ವೋತ್ತಮತ್ವಸ್ಥಾಪನೆ; ಅಗಸ್ತ್ಯಮುನಿಗಳಿಂದ ಸಾರ್ಥಕ ತೀರ್ಥಯಾತ್ರೆ; ಪುಲಸ್ತ್ಯರಿಂದ ತೀರ್ಥನಿರ್ಮಾಣ; ಪುಲಹರಿಂದ ಪುಣ್ಯಕ್ಷೇತ್ರವಾಸ; ಶಕ್ತಿಮುನಿಯಿಂದ ಸಾರ್ಥಕ ಸಂತತಿ; ವಸಿಷ್ಠರಿಂದ ಅಪೂರ್ವ ಯಾಜ್ಞಿಕನಿಷ್ಠೆ ಮಾಂಡವ್ಯರಿಂದ ಶಾಪಾನುಗ್ರಹಸಾಮರ್ಥ್ಯ; ಜಮದಗ್ನಿಗಳಿಂದ ಆತಿಥ್ಯಾದಿ ಗುಣಗಳು; ಗೌತಮರಿಂದ ಅನ್ನದಾನಾದಿ ಸದ್ಗುಣಗಳು; ಭರದ್ವಾಜರಿಂದ ಅಪೂರ್ವ ಬೋಧನ ಸಾಮರ್ಥ್ಯ ಮೊದಲಾದ ಗುಣಗಳು ಅನುಗ್ರಹೀತವಾಗಿ ಬರಲಿ ಎಂದು ಕೇಳಿಕೊಳ್ಳಬೇಕು ಎಂದು ಭಾವ.

೩೧. ಈ ಶ್ಲೋಕದ ಎರಡನೆಯ ಪಾದದಲ್ಲಿ 'ಶ್ರೀಮಾನತ್ರಿಮರೀಚಿಕೌತ್ಸಪುಲಹಾಃ' ಎಂಬುದಕ್ಕೆ 'ಶ್ರೀಮಾನತ್ರಿಮರೀಚ್ಯುಚಥ್ಯಪುಲಹಾಃ' ಎಂದು ಪಾಠಾಂತರವಿದೆ. '**ಉಚಥ್ಯ**' ಮುನಿಯು ಸಹ ಅಂಗಿರಸರ ಪುತ್ರ; ಬೃಹಸ್ಪತಿಯ ಅಣ್ಣ.

೩೨. ಸ್ವಾಯಂಭುವ ಮನ್ವಂತರದ ಸಪ್ತರ್ಷಿಗಳು :

ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ ಪುಲಹ, ಕ್ರತು ಮತ್ತು ವಸಿಷ್ಠ

ವೈವಸ್ವತಮನ್ವಂತರದ ಸಪ್ತರ್ಷಿಗಳು :

ಕಶ್ಯಪ, ಅತ್ರಿ, ವಸಿಷ್ಠ ವಿಶ್ವಾಮಿತ್ರ, ಗೌತಮ, ಜಮದಗ್ನಿ ಹಾಗೂ ಭರದ್ವಾಜ

೩೩. ಇಂತಹ ಋಷಿಗಳು ಕೆಲವೊಮ್ಮೆ ಶಾಪ ಕೊಡುವುದುಂಟು. ಆದರೆ, ಅವು ಹೆಚ್ಚಿನ ಸಂದರ್ಭಗಳಲ್ಲಿ ಅವರ ಪುಣ್ಯವೃದ್ಧಿಗೆ ಸಾಧನವಾಗುವಂತಹ ಅಪೂರ್ವ ಕಾರ್ಯಗಳೇ ಆಗಿರುತ್ತವೆ; ಶಾಪ ಪಡೆದವರಿಗೂ ಸಹ ಅವು ಪಶ್ಚಾತ್ತಾಪಾದಿಗಳಿಗೆ ಕಾರಣವಾಗಿ ಮುಂದೆ ಹೆಚ್ಚಿನ ಸಾಧನೆಗೆ ನೆರವಾಗುತ್ತವೆ. ಆದ್ದರಿಂದ ಅವರ ಶಾಪಾದಿ ಪ್ರವೃತ್ತಿಯನ್ನು ತಪ್ಪು ತಿಳಿಯಬೇಕಿಲ್ಲ.

*****

– ೪ –

## ಪುಣ್ಯಶ್ಲೋಕ ರಾಜರು

**ಮಾಂಧಾತಾ ನಹುಷೋऽಂಬರೀಷಸಗರೌ ರಾಜಾ ಪೃಥುರ್ಹೈಹಯಃ**
**ಶ್ರೀಮಾನ್ ಧರ್ಮಸುತೋ ನಳೋ ದಶರಥೋ ರಾಮೋ ಯಯಾತಿರ್ಯದುಃ।**
**ಇಕ್ಷ್ವಾಕುಶ್ಚ ವಿಭೀಷಣಶ್ಚ [1]ಭರತಶ್ಚೋತ್ತಾನಪಾದೋ ಧ್ರುವ-**
**ಶ್ಚೇತ್ಯಾದ್ಯಾ[2] ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥**

---

೧. ಭರತಶ್ಚೋತ್ತಾನಪಾದಧ್ರುವಾಶ್ಚೇತ್ಯಾದ್ಯಾ (ಪಾ.)

೨. ಋಷಿಮುನಿಗಳಂತೆ ಪುಣ್ಯಶ್ಲೋಕರಾದ ರಾಜರ ಸಂಖ್ಯೆ ಅಪಾರವಾಗಿದ್ದು ಮಹಾಭಾರತದಲ್ಲಿ ಅವರ ವಿವರ ದಾಖಲಾಗಿದೆ:
ಪೃಥುಂ ವೈನ್ಯಂ ನೃಪವರಂ ಪೃಥ್ವೀ ಯಸ್ಯಾಭವತ್ ಸುತಾ ॥
ಪ್ರಜಾಪತಿಂ ಸಾರ್ವಭೌಮಂ ಕೀರ್ತಯೇದ್ವಸುಧಾಧಿಪಮ್ ।
ಆದಿತ್ಯವಂಶಪ್ರಭವಂ ಮಹೇಂದ್ರಸಮವಿಕ್ರಮಮ್ ॥
ಪುರೂರವಸಮೈಲಂ ಚ ತ್ರಿಷು ಲೋಕೇಷು ವಿಶ್ರುತಮ್ ।
ಬುಧಸ್ಯ ದಯಿತಂ ಪುತ್ರಂ ಕೀರ್ತಯೇದ್ವಸುಧಾಧಿಪಮ್ ॥
ತ್ರಿಲೋಕವಿಶ್ರುತಂ ವೀರಂ ಭರತಂ ಚ ಪ್ರಕೀರ್ತಯೇತ್ ।
ಗವಾಮಯೇನ ಯಜ್ಞೇನ ಯೇನೇಷ್ಟಂ ವೈ ಕೃತೇ ಯುಗೇ ॥
ರಂತಿದೇವಂ ಮಹಾದೇವಂ ಕೀರ್ತಯೇತ್ ಪರಮದ್ಯುತಿಮ್ ।
ವಿಶ್ವಜಿತ್ತಪಸೋಪೇತಂ ಲಕ್ಷಣ್ಯಂ ಲೋಕಪೂಜಿತಮ್ ॥
ಯಥಾ ಶ್ವೇತಂ ಚ ರಾಜರ್ಷಿಂ ಕೀರ್ತಯೇತ್ ಪರಮದ್ಯುತಿಮ್ ।
ಸಗರಸ್ಯಾತ್ಮಜಾ ಯೇನ ಪ್ಲಾವಿತಾಸ್ತಾರಿತಾಸ್ತಥಾ ॥
ಹುತಾಶನಸಮಾನೇತಾನ್ ಮಹಾರೂಪಾನ್ ಮಹೌಜಸಃ।
ಉಗ್ರಕಾಯಾನ್ ಮಹಾಸತ್ತ್ವಾನ್ ಕೀರ್ತಯೇತ್ ಕೀರ್ತಿವರ್ಧನಾನ್ ॥
ದೇವಾನ್ ಋಷಿಗಣಾಂಶ್ಚೈವ ನೃಪಾಂಶ್ಚ ಜಗತೀಶ್ವರಾನ್ । – ಮಹಾಭಾರತ (ಅ.ಪ/೧೫೦/೪೭-೫೩)
ಆದ್ಯಃ ಪ್ರಕೀರ್ತಿತೋ ರಾಜನ್ ಸರ್ವಪಾಪಪ್ರಮೋಚನಃ।
ನೃಗೋ ಯಯಾತಿರ್ನಹುಷೋ ಯದುಃ ಪೂರುಶ್ಚ ವೀರ್ಯವಾನ್ ॥
ಧುಂಧಮಾರೋ ದಿಲೀಪಶ್ಚ ಸಗರಶ್ಚ ಪ್ರತಾಪವಾನ್ ।
ಕೃಶಾಶ್ವೋ ಯೌವನಾಶ್ವಶ್ಚ ಚಿತ್ರಾಶ್ವಃ ಸತ್ಯವಾಂಸ್ತಥಾ ॥
ದುಷ್ಯಂತೋ ಭರತಶ್ಚೈವ ತಥಾ ಚಕ್ರವರ್ತೀ ಮಹಾಯಶಾಃ।
ಪವನೋ ಜನಕಶ್ಚೈವ ತಥಾ ದೃಷ್ಟರಥೋ ನೃಪಃ॥
ರಘುರ್ನರವರಶ್ಚೈವ ತಥಾ ದಶರಥೋ ನೃಪಃ।
ರಾಮೋ ರಾಕ್ಷಸಹಾ ವೀರಃ ಶಶಬಿಂದುರ್ಭಗೀರಥಃ॥
ಹರಿಶ್ಚಂದ್ರೋ ಮರುತ್ತಶ್ಚ ತಥಾ ದೃಢರಥೋ ನೃಪಃ।
ಮಹೋದರ್ಯೋ ಹ್ಯಲರ್ಕಶ್ಚ ಐಲಶ್ಚೈವ ನರಾಧಿಪಃ॥

ಪದಚ್ಛೇದ : ಮಾಂಧಾತಾ, ನಹುಷಃ , ಅಂಬರೀಷಸಗರೌ, ರಾಜಾ, ಪೃ
ಹೈಹಯಃ, ಶ್ರೀಮಾನ್, ಧರ್ಮಸುತಃ, ನಳಃ, ದಶರಥಃ, ರಾಮಃ, ಯಯಾತಿಃ, ಯ
ಇಕ್ಷ್ವಾಕುಃ, ಚ, ವಿಭೀಷಣಃ, ಚ, ಭರತಃ, ಚ, ಉತ್ತಾನಪಾದಃ, ಧ್ರುವಃ, ಚ, ಇತ್ಯಾದ
ಭುವಿ, ಭೂಭುಜಃ, ಚ, ಸತತಂ, ಕುರ್ವಂತು, ನಃ, ಮಂಗಲಮ್.

**ಅನು: ಮಾಂಧಾತಾ, ನಹುಷ, ಅಂಬರೀಷ, ಮತ್ತು ಸಗರ, ಪೃಥುರಾಜ, ಕಾರ್ತವೀರ್ಯಾರ್ಜುನ, ಯುಧಿಷ್ಠಿರ, ನಳ, ದಶರಥ, ಶ್ರೀರಾಮ, ಯಯಾತಿ, ಯದು, ಇಕ್ಷ್ವಾಕು, ವಿಭೀಷಣ, ಭರತ, ಉತ್ತಾನಪಾದ ಮತ್ತು ಧ್ರುವ ಇವರೇ ಮೊದಲಾದ ಭೂಮಿಯಲ್ಲಿನ ರಾಜರು ಸದಾ ನಮಗೆ ಮಂಗಲವನ್ನುಂಟುಮಾಡಲಿ.**

ವಿ. ೧: ಕಾಲಕಾಲಕ್ಕೆ ಭೂಮಿಯನ್ನು ಪಾಲಿಸಿದ ಪ್ರಮುಖ ರಾಜರ ಸ್ಮರಣೆಯ ಮಾಡುತ್ತಾ, ಅವರಿಂದ ನಮಗೆ ಮಂಗಲ ಲಭಿಸಲಿ ಎಂಬ ಪ್ರಾರ್ಥನೆ ಇದರಲ್ಲಿ ಇದೆ.

೨. ರಾಜರ ಸಮರ್ಥ ಆಳ್ವಿಕೆಯಿಂದ ಜನರು ತಮ್ಮ ಕರ್ತವ್ಯವನ್ನು ವಿಹಿತರೀತಿ ಆಚರಿಸಲು ಸಾಧ್ಯವಾಗುವುದು. ಆದರಿಂದಾಗಿ, ಅವರ ಇಹ-ಪರಗಳ ಜೀ

---

ಕರಂಧಮೋ ನರಶ್ರೇಷ್ಠಃ ಕಧ್ಮೋರಶ್ಚ ನರಾಧಿಪಃ।
ದಕ್ಷೋಽಂಬರೀಷಃ ಕುಕುರೋ ರೈವತಶ್ಚ ಮಹಾಯಶಾಃ ॥
ಕುರುಃ ಸಂವರಣಶ್ಚೈವ ಮಾಂಧಾತಾ ಸತ್ಯವಿಕ್ರಮಃ।
ಮುಚುಕುಂದಶ್ಚ ರಾಜರ್ಷಿರ್ಜಹ್ನುರ್ಜಾಹ್ನವಿಸೇವಿತಃ॥
ಆದಿರಾಜಃ ಪೃಥುರ್ವೈನ್ಯೋ ಮಿತ್ರಭಾನುಃ ಪ್ರಿಯಂಕರಃ।
ತ್ರಸದ್ದಸ್ಯುಸ್ತಥಾ ರಾಜಾ ಶ್ವೇತೋ ರಾಜರ್ಷಿಸತ್ತಮಃ॥
ಮಹಾಭಿಷಶ್ಚ ವಿಖ್ಯಾತೋ ನಿಮಿರಾಜಾ ತಥಾಽಷ್ಟಕಃ।
ಆಯುಃ ಕ್ಷುಪಶ್ಚ ರಾಜರ್ಷಿಃ ಕಕ್ಷೇಯುಶ್ಚ ನರಾಧಿಪಃ॥
ಪ್ರತರ್ದನೋ ದಿವೋದಾಸಃ ಸುದಾಸಃ ಕೋಸಲೇಶ್ವರಃ।
ಐಲೋ ನಲಶ್ಚ ರಾಜರ್ಷಿರ್ಮನುಶ್ಚೈವ ಪ್ರಜಾಪತಿಃ॥
ಹವಿಧ್ರಶ್ಚ ಪೃಷಧ್ರಶ್ಚ ಪ್ರತೀಪಃ ಶಾಂತನುಸ್ತಥಾ।
ಅಜಃ ಪ್ರಾಚೀನಬರ್ಹಿಶ್ಚ ತಥೇಕ್ಷ್ವಾಕುರ್ಮಹಾಯಶಾಃ॥
ಅನರಣ್ಯೋ ನರಪತಿರ್ಜಾನುಜಂಘಸ್ತಥೈವ ಚ।
ಕಕ್ಷಸೇನಶ್ಚ ರಾಜರ್ಷಿರ್ಯೇ ಚಾನ್ಯೇ ಚಾನುಕೀರ್ತಿತಾಃ॥
ಕಲ್ಯಮುತ್ಥಾಯ ಯೋ ನಿತ್ಯಂ ಸಂಧ್ಯೇ ದ್ವೇಽಸ್ತಮಯೋದಯೇ।
ಪಠೇಚ್ಛುಚಿರನಾವೃತ್ತಃ ಸ ಧರ್ಮಫಲಭಾಗ್ ಭವೇತ್ ॥
ದೇವಾ ದೇವರ್ಷಯಶ್ಚೈವ ಸ್ತುತಾ ರಾಜರ್ಷಯಸ್ತಥಾ।
ಪುಷ್ಟಿಮಾಯುರ್ಯಶಃ ಸ್ವರ್ಗಂ ವಿಧಾಸ್ಯಂತಿ ಮಮೇಶ್ವರಾಃ॥
ಮಾ ವಿಘ್ನಂ ಮಾ ಚ ಮೇ ಪಾಪಂ ಮಾ ಚ ಮೇ ಪರಿಪಂಥಿನಃ।

ಸಾರ್ಥಕವಾಗುವುದು. ಮುಖ್ಯವಾಗಿ ಭಗವಂತನ ಪ್ರೀತಿ ಲಭಿಸಿ ಕೊನೆಗೆ ಮುಕ್ತಿಯನ್ನು ಸಂಪಾದಿಸಿಕೊಳ್ಳಲು ನೆರವಾಗುವುದು. ಇದರಿಂದಾಗಿ ರಾಜರ ಪಾತ್ರ ಮಾನವನ ಯಶಸ್ಸಿನಲ್ಲಿ ಪ್ರಮುಖವೆನ್ನಿಸುವಂತಹುದು. ದೇಶದ ಸಮಸ್ತ ಆಗುಹೋಗುಗಳು ಸಹ ರಾಜರ ಸಾಮರ್ಥ್ಯವನ್ನು ಅವಲಂಬಿಸಿರುವುದು. ಧರ್ಮರಕ್ಷಣೆಯ ಮುಖ್ಯ ಹೊಣೆ ರಾಜ-ಮಹಾರಾಜರದೇ ಆಗಿದೆ. ಧರ್ಮದ ಹಾದಿಯಲ್ಲಿ ಸಾಗುವವನಿಗೆ ಸೂಕ್ತ ರಕ್ಷಣೆಯನ್ನು ನೀಡುವುದು ಧರ್ಮವನ್ನು ತೊರೆದವರನ್ನು ಸೂಕ್ತ ರೀತಿಯಲ್ಲಿ ಶಿಕ್ಷಿಸುವುದು ರಾಜರ ಮುಖ್ಯ ಕರ್ತವ್ಯಗಳಲ್ಲೊಂದು. ಇದರಿಂದಾಗಿ ಜನರು ಉತ್ಸಾಹದಿಂದ ಧರ್ಮಾಚರಣೆಗೆ ತೊಡಗಲು, ಅಧರ್ಮವನ್ನು ತೊರೆಯಲು ಸಾಧ್ಯವಾಗುವುದು. ಅನ್ನ ಬಟ್ಟೆ ಹಾಗೂ ವಸತಿಗಳನ್ನು ಕಲ್ಪಿಸುವುದು ರಾಜನ ಕರ್ತವ್ಯ ಎಂಬುದು ಇಂದಿನ ಜನ ಅರಿತಿರುವರು. ಆದರೆ, ಅದಕ್ಕಿಂತ ಮುಖ್ಯವಾಗಿ ಜ್ಞಾನಸಂಪಾದನೆಗೆ ಸೂಕ್ತ ವ್ಯವಸ್ಥೆಯನ್ನು ಕಲ್ಪಿಸುವ ಮುಖ್ಯ ಕರ್ತವ್ಯ ರಾಜರದಾಗಿರುತ್ತದೆ ಎಂಬುದು ಶಾಸ್ತ್ರಗಳು ಸಾರಿರುವ ವಿಶೇಷವಾದ ಕರ್ತವ್ಯ. ಹಿಂದಿನ ಕಾಲದ ರಾಜರು ಇಂತಹ ಕರ್ತವ್ಯಪ್ರಜ್ಞೆಯನ್ನು ಹೊಂದಿ ನಡೆದದ್ದರಿಂದಲೇ ಧರ್ಮವು ಅಬಾಧಿತವಾಗಿ ಉಳಿದುಕೊಳ್ಳುವಂತಾಗಿ ಪ್ರಜೆಗಳ ಜೀವನ ಸುಖ-ಸಂತೋಷಗಳಿಂದ ಕೂಡಿರುತ್ತಿತ್ತು. ಆದಕ್ಕಾಗಿ ಅವರ ಸ್ಮರಣೆ ಶಾಸ್ತ್ರಗಳಲ್ಲಿ ವಿಹಿತವಾಗಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಇವರ ಸ್ಮರಣೆ ನಿರೂಪಿತವಾಗಿದೆ; ಆದರಂತೆ ಶ್ರೀಮದ್ಭಾಗವತಮಹಾಪುರಾಣದಲ್ಲೂ ಸಹ.

೩. '**ಮಾಂಧಾತೃ**' ಪೌರಾಣಿಕ ಚಕ್ರವರ್ತಿಗಳಲ್ಲಿ ಮಾಂಧಾತ ರಾಜನದು ದೊಡ್ಡ ಹೆಸರು. ಸೂರ್ಯವಂಶದ ಈ ರಾಜ ಯುವನಾಶ್ವ ಎಂಬುವವನ ಪುತ್ರ. ರಾಜ ಮಾಡಿದ ಪುಂಸವನ ವ್ರತದ ಫಲವಾಗಿ ಜನಿಸಿದವನು. ಪ್ರಮಾದವಶಾತ್ ತಂದೆ ಪುಂಸವನ ವ್ರತದ ಅಭಿಮಂತ್ರಿತ ಜಲವನ್ನು ತಾನೇ ಪ್ರಾಶನ ಮಾಡಿ, ಗರ್ಭವನ್ನು ಧರಿಸಿದ. ಆದರಿಂದಾಗಿ ಅವನ ಉದರವನ್ನು ಭೇದಿಸಿ ಇವನು ಜನಿಸುವಂತಾಯಿತು. ಇವನಿಗೆ ಸ್ವತಃ ದೇವೇಂದ್ರ ಅಮೃತದಲ್ಲಿ ಅದ್ದಿದ ಬೆರಳನ್ನು ಚೀಪಿಸಿ, ಸಂರಕ್ಷಿಸಿದ. ಮಾಂಧಾತ ಎಂಬ ಹೆಸರಿಗೆ ಇದು ಕಾರಣವಾಯಿತು. ಸುಪ್ರಸಿದ್ಧನಾದ ಮುಚುಕುಂದ ಚಕ್ರವರ್ತಿ ಈತನ ಪುತ್ರ. ಇವನ ಐವತ್ತು ಜನ ಪುತ್ರಿಯರನ್ನು ಸೌಭರಿ ಮುನಿಗಳು ವಿವಾಹವಾಗಿ ಅವರಲ್ಲಿ ಒಟ್ಟು ಐದು ಸಾವಿರ ಪುತ್ರರನ್ನು ಪಡೆದರು. ಪೌರಾಣಿಕ ಕಾಲದ ಸೂರ್ಯ ಮುಳುಗದ ಸಾಮ್ರಾಜ್ಯ ಎಂಬ ಕೀರ್ತಿ ಮಾಂಧಾತ ರಾಜನಿಗಿದೆ. ಶ್ರೀಕೃಷ್ಣನ ದರ್ಶನಭಾಗ್ಯ ಪಡೆದು ಮುಕ್ತಿಭಾಜನನಾದ ಮುಚುಕುಂದ ರಾಜ ಈ ಮಾಂಧಾತ ರಾಜನ ಪುತ್ರ.

೪. '**ನಹುಷ**' ಈತ ಚಂದ್ರವಂಶದ ರಾಜ; ಇವನು ಆಯು ಎಂಬ ರಾಜನ ಪುತ್ರ. ಯಯಾತಿಯ ತಂದೆ. ವೃತ್ರಾಸುರ ವಧೆಯ ನಿಮಿತ್ತದಿಂದಾಗಿ ಇಂದ್ರದೇವರು ಒಮ್ಮೆ

ಸಾವಿರವರ್ಷಗಳಷ್ಟು ದೀರ್ಘಕಾಲ ಸ್ವರ್ಗಾಧಿಪತ್ಯದಿಂದ ದೂರ ಇರುವ ಪ್ರಸಂಗ ಒದಗಿದಾಗ ಸ್ವರ್ಗಾಧಿಪತಿಯಾಗುವ ಅವಕಾಶ ಇವನಿಗೆ ಲಭಿಸಿತ್ತು. ದೇವತೆಗಳು ನೀಡಿದ ವರದಿಂದಾಗಿ ಇವನ ಕಣ್ಣಿಗೆ ಬಿದ್ದವರ ಸಕಲ ಹಿರಿಮೆಯು ಇವನಿಗೆ ಲಭಿಸುತ್ತಿತ್ತು. ಆದರಿಂದಾಗಿ ಮುಂದೆ ಇವನು ಸನ್ಮಾರ್ಗವನ್ನು ತೊರೆದು ಸ್ವತಃ ಶಚಿಯನ್ನೇ ಬಯಸುವಂತಹ ದರ್ಪವನ್ನು ತೋರಿದ. ಆಗ ಮುಖ್ಯವಾಗಿ ಬ್ರಹ್ಮದೇವರಿಂದ ಒದಗಿದ ಶಾಪದಿಂದಾಗಿ ಅಜಗರನಾಗಿ ಭೂಮಿಯಲ್ಲಿ ಜನಿಸಿದ. ಭೀಮಸೇನನಿಂದಾಗಿ ಇವನಲ್ಲಿ ತುಂಬಿದ್ದ ದೇವತೆಗಳ ಹಿರಿಮೆ ಎಲ್ಲ ಅಳಿದು ಯೋಗ್ಯತೆಗನುಗುಣವಾದ ಹಿರಿಮೆಯನ್ನು ಮಾತ್ರವೇ ಉಳಿಸಿಕೊಂಡ. ಮುಂದೆ ಧರ್ಮರಾಜ ಇವನ ಪ್ರಶ್ನೆಗಳಿಗೆ ಸೂಕ್ತ ಉತ್ತರವನ್ನು ನೀಡಿದಾಗ ಇವನ ಶಾಪ ಪರಿಹಾರವಾಗಿ ಸದ್ಗತಿಯನ್ನು ಪಡೆದ. ಭೀಮನನ್ನು ಗಟ್ಟಿಯಾಗಿ ಹಿಡಿದದ್ದರ ಫಲ ಇವನ ಸಕಲ ಅನಿಷ್ಟವೂ ಪರಿಹಾರವಾಗಿ ಉದ್ಧಾರವನ್ನು ಕಂಡ.

೫. '**ಅಂಬರೀಷ**'ನು ವೈವಸ್ವತ ಮನುವಿನ ಕಿರಿಯ ಪುತ್ರನಾದ ನಾಭಾಗನ ಪುತ್ರ. ಮಹಾಭಾಗವತ ಶಿರೋಮಣಿ ಎಂಬ ಖ್ಯಾತಿಗೆ ಪಾತ್ರನಾದ. ರುದ್ರದೇವರ ಅನುಗ್ರಹದಿಂದ ಜನಿಸಿದ ಹಿರಿಮೆ ಇವನದು. ದ್ವಾದಶೀ ಪಾರಣೆಯ ವ್ರತ ಈತನ ವಿಶಿಷ್ಟವಾದ ಹಿರಿಮೆ. ಒಮ್ಮೆ ಸಾಧನೀ ದ್ವಾದಶಿಯಂದು ವ್ರತದ ಪಾರಣೆಗಾಗಿ ಜಲಪ್ರಾಶನ ಮಾಡಿದ್ದರಿಂದ ದೂರ್ವಾಸರ ಕೋಪಕ್ಕೆ ಗುರಿಯಾದ. ಆದರೆ, ವಿಷ್ಣುಚಕ್ರದ ರಕ್ಷಣೆಯಿಂದಾಗಿ ಆಪತ್ತಿನಿಂದ ಪರಿಹಾರ ಕಂಡ. ಸ್ವತಃ ದೂರ್ವಾಸರೇ ವಿಷ್ಣುಚಕ್ರಕ್ಕೆ ಅಂಜುವಂತಾಯಿತು. ಕೊನೆಗೆ ಮಹಾವಿಷ್ಣುವಿನ ಆದೇಶದಂತೆ ಇವನನ್ನೇ ಶರಣುಹೊಂದಿ ಅವರು ವಿಷ್ಣುಚಕ್ರದಿಂದ ಬಿಡುಗಡೆಯನ್ನು ಕಂಡರು. ತನ್ನ ಸಕಲ ಹಿರಿಮೆಯೂ ಸಹ ಏಕಾದಶೀ ವ್ರತದ ಸಿದ್ಧಿಯೆಂದು ಭಾವಿಸಿದ ಸಾತ್ವಿಕ ಶಿರೋಮಣಿ ಇವನು.

೬. '**ಸಗರ**'ನು ಮತ್ತೊಬ್ಬ ಸೂರ್ಯವಂಶದ ರಾಜ. ಸವತಿಯರು ನೀಡಿದ ವಿಷದ ಸಮೇತವಾಗಿಯೇ ಇವನು ತನ್ನ ತಾಯಿಯ ಉದರದಿಂದ ಜನಿಸಿದ್ದರಿಂದ ಸಗರ ಎಂದೇ ಹೆಸರಾದ. ಇವನ ಇಬ್ಬರು ಪತ್ನಿಯರಲ್ಲಿ ಒಬ್ಬಳಿಗೆ ಅರವತ್ತು ಸಾವಿರ ಪುತ್ರರು ಜನಿಸಿದರೆ, ಮತ್ತೊಬ್ಬಳಲ್ಲಿ ಅಸಮಂಜಸ ಎಂಬ ಒಬ್ಬನೇ ಪುತ್ರ ಜನಿಸಿದ. ಅಸಮಂಜಸನ ಪುತ್ರನೇ ಅಂಶುಮಂತ. ಅವನ ವಂಶದ ಭಗೀರಥನಿಂದಾಗಿ ಧರೆಗಿಳಿದ ವಿಷ್ಣುಪದಿಯಾದ ಭಾಗೀರಥಿಯಿಂದ ಅರವತ್ತುಸಾವಿರ ಸಗರ ಪುತ್ರರ ಉದ್ಧಾರವಾಯಿತು. ಸಗರ ಪುತ್ರರು ಅಶ್ವದ ಅನ್ವೇಷಣೆಗಾಗಿ ಭೂಮಿಯನ್ನು ಅಗೆದಿದ್ದರ ಫಲವಾಗಿ ಸಮುದ್ರ ವಿಸ್ತಾರಗೊಂಡು ಸಾಗರ ಎಂಬ ಹೆಸರನ್ನು ಪಡೆಯಿತು.

೭. '**ಪೃಥು**' ಧ್ರುವ ಚಕ್ರವರ್ತಿಯ ಪರಂಪರೆಯಲ್ಲಿ ಬಂದ ಸುಪ್ರಸಿದ್ಧ ಮಹಾರಾಜ-ರಲ್ಲಿ ಪೃಥು ಚಕ್ರವರ್ತಿಯದು ಅಗ್ರಸ್ಥಾನ. ವೇನನ ಬಾಹುವಿನ ಮಥನದಿಂದ

ಜನಿಸಿದವನು ಇವನು. ಪೃಥುನಾಮಕ ಭಗದ್ರೂಪದ [೧]ಆವೇಶದಿಂದಾಗಿ ಇವನ ಸಾಧನೆ ಲೋಕೋತ್ತರವೆನ್ನಿಸಿತು. ಗೋ ರೂಪದ ಪೃಥ್ವಿಯಿಂದ ಲೋಕಕ್ಕೆ ಅಗತ್ಯವೆನ್ನಿಸಿದ ಸಮಸ್ತವನ್ನೂ ಪಡೆದ ಸಾಧನೆ ಈತನದು. ಅರ್ಚಿದೇವೀ ಇವನ ಪತ್ನಿ. ಅಧಿಕಾರ ವಿಕೇಂದ್ರೀಕರಣದ ಪರಿಕಲ್ಪನೆಯ ರಾಜ್ಯಭಾರ ಇವನದಾಗಿತ್ತು. ಸನತ್ಕುಮಾರರ ಉಪದೇಶದಿಂದ ವಿಶೇಷ ತತ್ತ್ವಶ್ರವಣ ಮಾಡಿ ಕೊನೆಗೆ ಸಪತ್ನೀಕನಾಗಿ ಬದರಿಗೆ ತೆರಳಿ ಅಲ್ಲಿಯೇ ದೇಹತ್ಯಾಗ ಮಾಡಿ ಸದ್ಗತಿಗೆ ತೆರಳಿದ. ಶ್ರೀಮದ್ಭಾಗವತ ಹಾಗೂ ವಿಷ್ಣುಪುರಾಣಗಳಲ್ಲಿ ಈತನ ವಿಷಯ ವಿವರವಾಗಿ ನಿರೂಪಿತವಾಗಿದೆ.

೮. '**ಹೈಹಯ**' ಹೈಹಯ ಎಂದರೆ ಕಾರ್ತವೀರ್ಯಾರ್ಜುನ; ಯದುವಂಶದ ಕೃತವೀರ್ಯ ಎಂಬವನ ಪುತ್ರನಾದ ಇವನು ಶ್ರೀಹರಿಯ ದತ್ತಾತ್ರೇಯ ರೂಪದ ಆರಾಧಕ. ಅದರಿಂದಾಗಿಯೇ ಮಹಾಯೋಗಿ ಎನ್ನಿಸಿದ. ಇವನ ಆಳ್ವಿಕೆಯಲ್ಲಿ ಕಳ್ಳತನ, ಸುಳ್ಳುತನಗಳು ಮನಸ್ಸಿನಲ್ಲಿಯೂ ಸುಳಿಯುವಂತಿರಲಿಲ್ಲ. ಅಂದಿಗಿರಲಿ, ಇಂದಿಗೂ ಸಹ ಇವನ ನಾಮಸ್ಮರಣೆಯಿಂದ ಕಳೆದ ವಸ್ತುಗಳು ಕೂಡಲೇ ಮರಳಿ ಸಿಕ್ಕುವವು ಎಂಬುದು ಪೌರಾಣಿಕ ಪ್ರಸಿದ್ಧಿ. ಸಾವಿರ ತೋಳುಗಳ ಇವನು ಅಪ್ರತಿಮ ವೀರನೇ ಎನ್ನಿಸಿದ್ದ. ಮುಂದೆ ಪ್ರಾರಬ್ಧವಶಾತ್ ಅಸುರಾವೇಶ ಒದಗಿ ಜಮದಗ್ನಿ ಮುನಿಗೆ ದ್ರೋಹ ಬಗೆದ. ಅದರಿಂದಾಗಿ ಪರಶುರಾಮರೂಪದ ಶ್ರೀಹರಿಯಿಂದ ಹತನಾದ. ಇವನ ಪುತ್ರರು ಪರಶುರಾಮನಿಗೆ ದ್ರೋಹ ಬಗೆದು ಹತರಾದರು.

೯. '**ಧರ್ಮಸುತ**' ಎಂದರೆ ಯಮಧರ್ಮನ ಅವತಾರನಾದ ಯುಧಿಷ್ಠಿರ. ಪಂಚಪಾಂಡವರಲ್ಲಿ ಹಿರಿಯ. ಧರ್ಮದ ಸಾಕಾರರೂಪವೆನ್ನಿಸಿದ್ದ ಮಹನೀಯ. ಭೀಮಾರ್ಜುನರ ಸಹಕಾರದಿಂದಾಗಿ ರಾಜಸೂಯಾದಿ ಯಜ್ಞಗಳನ್ನು ಮಾಡಿ ಕೀರ್ತಿವಂತನಾದ. ಜೂಜಿನಲ್ಲಿ ಶಕುನಿಯ ಕುತಂತ್ರದಿಂದಾಗಿ ಸರ್ವಸ್ವವನ್ನೂ ಕಳೆದುಕೊಂಡ. ಕೊನೆಗೆ ಭೀಮ-ದ್ರೌಪದಿಯರ ಉಪದೇಶದಿಂದಾಗಿ ಕರ್ತವ್ಯಪರಾಯಣನಾಗಿ ಕುರುಕ್ಷೇತ್ರ ಯುದ್ಧಕ್ಕೆ ಸಿದ್ಧನಾದ. ಯುದ್ಧದಲ್ಲಿ ಜಯಶೀಲನಾದರೂ, ಅದನ್ನು ಪಾಪವೆಂದು ಬಗೆದು ತ್ಯಾಗಕ್ಕೆ ಸಿದ್ಧನಾದ. ಶ್ರೀಕೃಷ್ಣ ಭೀಷ್ಮರಲ್ಲಿ ನಿಂತು ಮಾಡಿದ ಉಪದೇಶ ಹಾಗೂ ಶ್ರೀವೇದವ್ಯಾಸರು ಉಪದೇಶಿಸಿದ ಅಶ್ವಮೇಧ ಯಾಗದ ಆಚರಣೆಗಳಿಂದ ಪುನಃ ನೆಮ್ಮದಿಯನ್ನು ಕಂಡ. ಅಜಗರಪ್ರಶ್ನೆ ಯಕ್ಷಪ್ರಶ್ನೆಗಳಲ್ಲಿ ಈತನ ಅಪಾರ ಧರ್ಮಪ್ರಜ್ಞೆ ಗೋಚರಿಸುವುದು. ಭೀಷ್ಮರಲ್ಲಿ ನಿಂತು ಶ್ರೀಕೃಷ್ಣ ಮಾಡಿದ ಉಪದೇಶದ ಶ್ರವಣ ಈತನ ವಿಶೇಷ ಸಾಧನೆಗಳಲ್ಲೊಂದು. ಅಶ್ವಮೇಧಯಾಗದ ಬಳಿಕ ಶ್ರೀಕೃಷ್ಣನಿಂದ ವೈಷ್ಣವ ಧರ್ಮಗಳನ್ನು ವಿಶೇಷವಾಗಿ ತಿಳಿದ.

---

೧. ಆವಿವೇಶ ಪೃಥುಂ ದೇವಃ ಶಂಖೀ ಚಕ್ರೀ ಚತುರ್ಭುಜಃ। - (ಭಾಗವತತಾತ್ಪರ್ಯ ೧/೩/೧೪)

ತನ್ನನ್ನು ನಂಬಿ ಬಂದ ನಾಯಿಯನ್ನೂ ಸಹ ತೊರೆಯದ ಕರುಣಾಮೂರ್ತಿ ಇವನು. ಸಶರೀರ ಸ್ವರ್ಗಕ್ಕೆ ತೆರಳಿ, ಮುಂದೆ ಅಲ್ಲಿನ ದೇವಗಂಗೆಯಲ್ಲಿ ದೇಹತ್ಯಾಗ ಮಾಡಿ ಕೊನೆಗೆ ತನ್ನ ಮೂಲರೂಪವನ್ನು ಸೇರಿದ. ಧರ್ಮರಾಜನ ಸ್ಮರಣೆಯಿಂದ ಧರ್ಮಪ್ರಜ್ಞೆ ಹೆಚ್ಚುವುದು ಎಂಬ [೧] ಮಹಾಭಾರತದ ಮಾತಿನ ಹಿನ್ನೆಲೆಯಲ್ಲಿ ಇಲ್ಲಿ ಆತನ ಸ್ಮರಣೆ ಅತ್ಯಂತ ಸೂಕ್ತವಾಗಿದೆ.

೧೦. **'ನಳ'** ನಳಚಕ್ರವರ್ತಿಯು ಪ್ರಾತಃಸ್ಮರಣೀಯ ರಾಜರಲ್ಲಿ ಒಬ್ಬನಾಗಿ ಖ್ಯಾತನಾಗಿರುವನು. ದಮಯಂತಿಯು ಇವನ ಪತ್ನಿ. ಇಂದ್ರಸೇನ ಹಾಗೂ ಇಂದ್ರಸೇನೆ ಇವರ ಮಕ್ಕಳು. ಇಂದ್ರಸೇನೆ ಪಂಚದೇವೀಯುಕ್ತಳಾದ ಭಾರತೀ ಅವತಾರ. ಕಲಿಪ್ರಭಾವಕ್ಕೆ ಒಳಗಾಗಿ ಅನೇಕ ಬಗೆಯ ಕಷ್ಟಕೋಟಲೆಗೆ ಗುರಿಯಾದ ನಳ, ಕೊನೆಗೆ ಸರ್ವವಿಧದಲ್ಲೂ ಯಶಸ್ವಿ ಎನ್ನಿಸುವುದು ವಿಶೇಷ. ನಳಪಾಕ ಎಂಬ ಸುಪ್ರಸಿದ್ಧವಾದ ಮಾತಿನಲ್ಲಿ ಈತನ ಪಾಕಪ್ರಾವೀಣ್ಯ ನಿರೂಪಿತವಾಗಿದೆ. ಪ್ರಾತಃಕಾಲದಲ್ಲಿ ಈತನ ಸ್ಮರಣೆ ಕಲಿನಾಶಕ ಎಂದು ಪುರಾಣಗಳಲ್ಲಿ ಬಂದಿದೆ[೨].

೧೧. **'ದಶರಥ'** ಶ್ರೀರಾಮ-ಲಕ್ಷ್ಮಣಾದಿಗಳ ತಂದೆ. ಕೌಸಲ್ಯೆ ದಶರಥನ ಪಟ್ಟಮಹಿಷಿ. ಸುಮಿತ್ರೆ, ಕೈಕೇಯರು ಇತರ ಪತ್ನಿಯರು. ಇವರೊಂದಿಗೆ ಇನ್ನೂ ೨೫೦ ಪತ್ನಿಯರು ಈತನಿಗಿದ್ದ ವಿವರ ವಾಲ್ಮೀಕಿ ರಾಮಾಯಣ ಹಾಗೂ ಸಂಗ್ರಹ ರಾಮಾಯಣಗಳಲ್ಲಿ ಬಂದಿದೆ. ಇವನು ಸ್ವಾಯಂಭುವಮನುವಿನ ಅವತಾರ ಎಂಬ ವಿವರ ಪದ್ಮಪುರಾಣದಲ್ಲಿದ್ದು ಅದು ಶ್ರೀನಾರಾಯಣಪಂಡಿತರ ಅಂಶಾವತಾರ ಎಂಬ ಕೃತಿಯಲ್ಲಿ ಉಲ್ಲೇಖಿತವಾಗಿದೆ. ಶಬ್ದವೇಧಿಯ ವಿದ್ಯೆಯಲ್ಲಿ ಇವನ ಚಾತುರ್ಯ ಅನುಪಮವಾಗಿತ್ತು. ಕೈಕೇಯಿಗೆ ಕೊಟ್ಟಿದ್ದ ವಚನಕ್ಕೆ ಕಟ್ಟುಬಿದ್ದು ಇವನು ಶ್ರೀರಾಮನ ವನವಾಸಕ್ಕೆ ಕಾರಣನಾಗುತ್ತಾನೆ. ಆ ಕೊರಗಿನಲ್ಲಿಯೇ ನಿರ್ಯಾಣ ಹೊಂದುತ್ತಾನೆ. ರಾವಣ ಸಂಹಾರದ ಬಳಿಕ ಇವನು ಸಶರೀರನಾಗಿ ಕಾಣಿಸಿಕೊಳ್ಳುವುದು ರೋಚಕ ಸಂಗತಿ. ಸಾಕ್ಷಾತ್ ಭಗವಂತನಾದ ಶ್ರೀಹರಿ ಇವನಿಗೆ ಶ್ರೀರಾಮರೂಪದಿಂದ ಪುತ್ರ ಎನಿಸಿದರೆ, ಸಾಕ್ಷಾತ್ ಮಹಾಲಕ್ಷ್ಮೀ ಸೀತಾರೂಪದಿಂದ ಸೊಸೆ ಎನ್ನಿಸುವಳು.

೧೨. **'ಶ್ರೀರಾಮ'** ಶ್ರೀಹರಿಯ ದಶಾವತಾರಗಳಲ್ಲಿ ಏಳನೆಯ ರೂಪ. ಸಪ್ತಕಾಂಡದ ರಾಮಾಯಣದಲ್ಲಿ ಈ ಅವತಾರದ ಚರಿತ್ರೆ ನಿರೂಪಿತವಾಗಿದೆ. ಈ ರೂಪದಿಂದ ಶ್ರೀಹರಿ ಆದರ್ಶ ರಾಜ್ಯದ ಪರಿಕಲ್ಪನೆಯನ್ನು ಜಗತ್ತಿಗೆ ನೀಡುತ್ತಾನೆ. ರಾವಣ-ಕುಂಭಕರ್ಣಾದಿಗಳ

---

೧. ಧರ್ಮೋ ವಿವರ್ಧತೇ ಯುಧಿಷ್ಠಿರ ಕೀರ್ತನೇನ। – ಮಹಾಭಾರತ

೨. ಕರ್ಕೋಟಕಸ್ಯ ನಾಗಸ್ಯ ದಮಯಂತ್ಯಾ ನಳಸ್ಯ ಚ।
ಋತುಪರ್ಣಸ್ಯ ರಾಜರ್ಷೇಃ ಕೀರ್ತನಂ ಕಲಿನಾಶನಮ್ ॥ – ಪುರಾಣವಾಕ್ಯ

ಹರಣ ಈ ಅವತಾರದಿಂದ ನಡೆದ ದುಷ್ಟನಿಗ್ರಹ ಕಾರ್ಯ. ಗುಹ, ಶಬರಿ, ಶರಭಂಗ, ಜಟಾಯು ಮೊದಲಾದ ಸಾತ್ವಿಕರ ಉದ್ಧಾರ ಕಾರ್ಯವು ಈತನಿಂದ ನಡೆದಿದೆ. ಸುಗ್ರೀವ-ವಿಭೀಷಣ ಮೊದಲಾದವರು ಈತನ ಅನುಗ್ರಹದಿಂದ ರಾಜ್ಯ ಗಳಿಸಿದರು. ರಾವಣನ ಮೂಲಬಲವನ್ನು ಸಂಹರಿಸುವಾಗ ಮಹೌಘಗಟ್ಟಲೆ ರೂಪವನ್ನು ಸ್ವೀಕರಿಸುವ ಮೂಲಕ ಈ ರೂಪದಲ್ಲೂ ತನ್ನ ವಿಶ್ವರೂಪವನ್ನು ಶ್ರೀಹರಿ ತೋರಿಸಿದ. ಹನುಮಂತನಿಗೆ ಬ್ರಹ್ಮಪಟ್ಟವನ್ನು ನೀಡಿದ ಶ್ರೀರಾಮ ಸ್ವಯಂ ಪರಬ್ರಹ್ಮ ಎಂಬುದಕ್ಕೆ ಗಮಕ[೧]. ಶ್ರೀರಾಮಚರಿತೆಗೆ 'ಮೂಲರಾಮಾಯಣ'ವೆಂಬ ಇತಿಹಾಸ, ಮಹಾಭಾರತದ ವನಪರ್ವ, ಶ್ರೀಮದ್ಭಾಗವತಾದಿ ಪುರಾಣಗಳು ಮುಖ್ಯ ಆಕರಗಳಾಗಿವೆ. ಶ್ರೀರಾಮನ ಸ್ಮರಣೆಯಿಂದ ಪ್ರಜೆಗಳು ಆರಾಮವಾಗಿದ್ದ ವಿವರ ರಾಮಾಯಣದಲ್ಲಿ ಬಂದಿದೆ[೨].

೧೩. '**ಯಯಾತಿ**' ಇವನು ಚಂದ್ರವಂಶದ ರಾಜ. ನಹುಷನ ಪುತ್ರ. ಯದು, ಪುರು ಮೊದಲಾದ ಐವರ ತಂದೆ. ದೇವಯಾನಿ ಹಾಗೂ ಶರ್ಮಿಷ್ಠೆ ಇವನ ಪತ್ನಿಯರು. ಶುಕ್ರಾಚಾರ್ಯರ ಶಾಪದಿಂದ ಅಕಾಲದಲ್ಲಿ ಇವನಿಗೆ ವೃದ್ಧಾಪ್ಯ ಒದಗಿತ್ತು. ಅದನ್ನು ಸ್ವೀಕರಿಸಿ ತನ್ನ ಯೌವನವನ್ನು ಇವನಿಗೆ ಧಾರೆ ಎರೆದ ಪುರು ಇವನ ವಿಶೇಷ ಪ್ರೀತಿಗೆ ಪಾತ್ರನಾದ. ಇವನ ಹಿರಿಮೆ ಪುತ್ರನಾದ ಯದುವಿನ ವಂಶದಲ್ಲಿ ಸರ್ವೋತ್ತಮನಾದ ಭಗವಂತ ಶ್ರೀಕೃಷ್ಣನಾಗಿ ಅವತರಿಸಿದ; ಕಿರಿಯ ಪುತ್ರನಾದ ಪುರುವಿನ ವಂಶದಲ್ಲಿ ಜೀವೋತ್ತಮರಾದ ವಾಯುದೇವರು ಭೀಮಸೇನನಾಗಿ ಜನಿಸಿದರು. ಕಾಮವನ್ನು ಎಂದೂ ಸಹ ಉಪಭೋಗದಿಂದ ಜಯಿಸಲು ಸಾಧ್ಯವಿಲ್ಲ, ಅದರಿಂದಾಗಿ ಕಾಮ ಬೆಳೆಯುವುದೇ ಹೊರತು ಅಳಿಯದು ಎಂಬ ಇವನ ಮಾತು ಯಯಾತಿ ಗೀತಾ ಎಂದೇ ಪ್ರಸಿದ್ಧವಾಗಿದೆ.

೧೪. '**ಯದು**' ಇವನು ಯಯಾತಿಯ ಹಿರಿಯ ಮಗ. ದೇವಯಾನಿ ಇವನ ತಾಯಿ. ಸುಪ್ರಸಿದ್ಧ ವಂಶ ಎನ್ನಿಸಿದ್ದ ಯದುವಂಶದ ಮೂಲಪುರುಷ ಇವನು. ಇವನ

---

೧. ಭಗವಂತನಾದ ಶ್ರೀರಾಮನನ್ನು ಈ ರೀತಿಯಾದ ರಾಜರ ಗುಂಪಿನಲ್ಲಿ ಸೇರಿಸಿರುವುದು ಉಚಿತವೇ? ಎಂಬ ಪ್ರಶ್ನೆಗೆ ಅವಕಾಶವಿದೆ. ಅದಕ್ಕೆ ಅಶ್ವತ್ಥಾಮಾ ಬಲಿರ್ವ್ಯಾಸಃ ಹನೂಮಾಂಶ್ಚ ವಿಭೀಷಣಃ । ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ । ಎಂಬಲ್ಲಿ ಚಿರಂಜೀವಿಗಳ ಸಾಲಿನಲ್ಲಿ ಸಾಕ್ಷಾತ್ ಭಗವದವತಾರರಾದ ವೇದವ್ಯಾಸರನ್ನು, ಪರಶುರಾಮರನ್ನು ಸೇರಿಸಿರುವಂತೆ, ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ । ಪಂಚಕನ್ಯಾಸ್ಮರೇನ್ನಿತ್ಯಂ ಮಹಾಪಾತಕನಾಶನಮ್ । ಎಂಬುದಾಗಿ ಪಂಚ ಮಹಾಪತಿವ್ರತೆಯರ ಸಾಲಿನಲ್ಲಿ ಸಾಕ್ಷಾತ್ ಮಹಾಲಕ್ಷ್ಮಿಯಾದ ಸೀತಾದೇವಿಯನ್ನು ಸೇರಿಸಿರುವಂತೆ ಎಂದು ತಿಳಿಯಬೇಕು.

೨. ರಾಮೋ ರಾಮೋ ರಾಮ ಇತಿ ಪ್ರಜಾನಾಮಭವನ್ ಕಥಾಃ।
ರಾಮಭೂತಂ ಜಗತ್ಸರ್ವಂ ರಾಮೇ ರಾಜ್ಯಂ ಪ್ರಶಾಸತಿ॥ – ವಾಲ್ಮೀಕಿರಾಮಾಯಣ
ರಾಮನಾಮವ ನುಡಿ ನುಡಿ। ಕಾಮಕ್ರೋಧವ ಬಿಡಿ ಬಿಡಿ। – ಶ್ರೀಪುರಂದರದಾಸರು

ವಂಶದಲ್ಲಿ ಅವತರಿಸಿದ್ದರಿಂದ ಶ್ರೀಕೃಷ್ಣನಿಗೆ ಯಾದವಕೃಷ್ಣ ಎಂದು ಹೆಸರು. ಭೋಜ, ವೃಷ್ಣಿ ಅಂಧಕ ಮೊದಲಾದ ಅನೇಕ ವಂಶದವರಿಗೂ ಇವನೇ ಮೂಲಪುರುಷ.

೧೫. **'ಇಕ್ಷ್ವಾಕು'** ವೈವಸ್ವತಮನುವಿನ ಹತ್ತು ಜನ ಪುತ್ರರಲ್ಲಿ ಒಬ್ಬ ಇವನ ವಂಶದಲ್ಲಿಯೇ ಶ್ರೀಹರಿಯು ರಾಮರೂಪದಿಂದ ಜನಿಸಿದ.

೧೬. **'ವಿಭೀಷಣ'** ವಿಶ್ರವಸ್ ಮುನಿಯ ಪುತ್ರ; ತಾಯಿ ಕೇಕಸಿ. ಇವನ ಸೋದರರಾದ ರಾವಣ-ಕುಂಭಕರ್ಣಾದಿಗಳು ದುರ್ಮಾರ್ಗದಲ್ಲಿ ಬದುಕಿದರೆ, ಇವನು ಮಾತ್ರ ಸನ್ಮಾರ್ಗದಲ್ಲಿಯೇ ಬದುಕಿದ. ರಾವಣ ಮಾಡಿದ ಸೀತಾಪಹರಣಕಾರ್ಯವನ್ನು ಬಲವಾಗಿ ವಿರೋಧಿಸಿದ ಇವನು, ಮುಂದೆ ರಾಮನನ್ನು ಶರಣುಹೊಂದಿದ. ಹಾಗೂ ಅವನ ಅನುಗ್ರಹದಿಂದ ಲಂಕಾಧಿಪತ್ಯ ಹಾಗೂ ಚಿರಂಜೀವಿತ್ವವನ್ನು ಪಡೆದುಕೊಂಡ. ಮುಂದೆ ಕುಬೇರನಿಗೆ ಸೇನಾಧಿಪತಿ ಎನ್ನಿಸಿದ. ಎಂತಹ ಮಹಾ ಆಪತ್ತಿನಲ್ಲೂ ತನ್ನ ಬುದ್ಧಿ ಧರ್ಮದ ಹಾದಿಯನ್ನು ತೊರೆಯದಿರಲಿ ಎಂಬ ವರವನ್ನು ಬ್ರಹ್ಮದೇವರಿಂದ ಪಡೆದುಕೊಂಡಿದ್ದು ಇವನ ಹಿರಿಮೆ. ಮಹಾಭಾರತಕಾಲದಲ್ಲೂ ಇವನ ಉಲ್ಲೇಖ ಬಂದಿದ್ದು ಪಾಂಡವರ ರಾಜಸೂಯಯಾಗಕ್ಕೆ ಇವನು ನೀಡಿದ ಅಪಾರ ಕಾಣಿಕೆಯನ್ನು ಸಹದೇವ ಯುಧಿಷ್ಠಿರನಿಗೆ ಒಪ್ಪಿಸಿದ; ಸಪ್ತಚಿರಂಜೀವಿಗಳಲ್ಲಿ ಇವನು ಒಬ್ಬ.

೧೭. **'ಭರತ'**: ಭರತ ಎಂಬ ಹೆಸರಿನವರು ಅನೇಕರಿರುವರು. ಅದರಲ್ಲಿ ರಾಮನ ತಮ್ಮ ಭರತ ಕಾಮನ ಅವತಾರ. ಅವನ ರಾಮಭಕ್ತಿ ಅನನ್ಯವಾದುದು. ಇನ್ನೊಬ್ಬ ಭರತ ಜಡಭರತನೆಂದು ಪ್ರಸಿದ್ಧನಾದವನು. ಅವನು ಋಷಭನಾಮಕ ಭಗವಂತನ ನೂರು ಪುತ್ರರಲ್ಲಿ ಹಿರಿಯನಾದವನು. ಅವನ ಹಿರಿಮೆಯ ಸಂಕೇತವಾಗಿ ಮೊದಲು ಅಜನಾಭ ಎಂಬ ಹೆಸರಿನ ಖಂಡ ಆ ಬಳಿಕ ಭರತಖಂಡ ಎಂದು ಪ್ರಸಿದ್ಧವಾಯಿತು. ಜಡಭರತನ ಮೂರು ಜನ್ಮಗಳ ಕಥೆ ಶ್ರೀಮದ್ಭಾಗವತಮಹಾಪುರಾಣದಲ್ಲಿ ಸುಪ್ರಸಿದ್ಧ. ದುಷ್ಯಂತ-ಶಕುಂತಲೆಯರ ಮಗ ಇನ್ನೊಬ್ಬ ಭರತ. ಅವನಿಂದಾಗಿ ಅವನ ವಂಶಕ್ಕೆ ಭರತವಂಶ ಎಂದೇ ಹೆಸರಾಯಿತು. ಸಕಲ ಜಗತ್ತನ್ನೂ ಧರಿಸಿರುವುದರಿಂದ ಶ್ರೀವಾಯುದೇವರಿಗೂ ಭರತ ಎಂಬ ಹೆಸರಿದೆ.

೧೮. **'ಉತ್ತಾನಪಾದ'** ಇವನು ಸ್ವಾಯಂಭುವಮನುವಿನ ಇಬ್ಬರು ಪುತ್ರರಲ್ಲಿ ಕಿರಿಯ; ಪ್ರಿಯವ್ರತ ಇವನ ಅಣ್ಣ. ಇವನಿಗೆ ಸುನೀತಿ ಹಾಗೂ ಸುರುಚಿ ಎಂಬ ಇಬ್ಬರು ಪತ್ನಿಯರಿದ್ದರು. ಸುನೀತಿಯ ಮಗ ಧ್ರುವ. ಸುರುಚಿಯ ಮಗ ಉತ್ತಮ. ಸುರುಚಿಯ ಮೇಲಿನ ಇವನ ಪಕ್ಷಪಾತ ಧ್ರುವನಿಗೆ ಅನ್ಯಾಯ ಎಸಗುವಂತೆ ಮಾಡಿತು. ಮುಂದೆ ಇವನು ಅದಕ್ಕಾಗಿ ಬಹಳ ನೊಂದ.

೧೯. '**ಧ್ರುವ**' ಧ್ರುವ ಉತ್ತಾನಪಾದನ ಮಗ. ಸುರುಚಿಯಿಂದಾದ ಅಪಚಾರದಿಂದ ನೊಂದ ಇವನು ತಾಯಿ ಸುನೀತಿಯ ಮಾತಿನಂತೆ ಶ್ರೀಹರಿಯನ್ನು ಆರಾಧಿಸಿದ. ನಾರದರ ಉಪದೇಶದಂತೆ ವಾಸುದೇವದ್ವಾದಶಾಕ್ಷರಮಂತ್ರವನ್ನು ಶ್ರದ್ಧೆಯಿಂದ ಜಪಿಸಿ ಶ್ರೀಹರಿಯನ್ನು ಸಾಕ್ಷಾತ್ಕರಿಸಿಕೊಂಡ. ವಾಸುದೇವರೂಪದ ಶ್ರೀಹರಿಯ ಪರಮಭಕ್ತನೆನ್ನಿಸಿದ ಇವನು ಆರು ತಿಂಗಳುಗಳ ಕಾಲ ಮಾಡಿದ ಅದ್ಭುತ ಸಾಧನೆಯ ಫಲವಾಗಿ ಭರತಖಂಡವನ್ನಾಳಿದ ರಾಜಶ್ರೇಷ್ಠರ ಸಾಲಿಗೆ ಸೇರಿದ. ಅಪೂರ್ವರೀತಿಯಲ್ಲಿ ೩೬೦೦೦ ವರ್ಷಗಳ ಕಾಲ ರಾಜ್ಯಭಾರ ಮಾಡಿದ ಇವನು ಮುಂದೆ ಬದರಿಯಲ್ಲಿ ದೇಹತೊರೆದು ಶ್ರೀಹರಿಯ ಅನುಗ್ರಹದಿಂದ ಧ್ರುವನಕ್ಷತ್ರಕ್ಕೆ ಅಧಿಪತಿ ಎನ್ನಿಸಿದ. ಇಂದಿಗೂ ಗಗನದಲ್ಲಿ ಸದಾ ಉತ್ತರದಿಕ್ಕಿನಲ್ಲಿಯೇ ಬೆಳಗುವ ಧ್ರುವ ನಕ್ಷತ್ರ ಪ್ರಾಕೃತಿಕ ದಿಕ್ಸೂಚಿ ಎಂದೇ ಮಾನ್ಯವಾಗಿದೆ.

೨೦. ಇವರಿಗೂ ಸಹ ಎರಡನೆಯ ಶ್ಲೋಕದಲ್ಲಿ ಹೇಳಿದಂತೆ '**ಸಸ್ತ್ರೀಕಾಃ**' ಎಂಬುದನ್ನು ಸೇರಿಸಿಕೊಳ್ಳಬೇಕು. ಇದರಿಂದ ಅವರ ಪತ್ನಿಯರು ಸಹ ಮಂಗಲವನ್ನು ನೀಡಲಿ ಎಂಬ ಭಾವ ತಿಳಿಯುವುದು.

೨೧. ಮಾಂಧಾತ ರಾಜನಿಂದ ಅಮೃತಪ್ರಾಶನ ಯೋಗ; ನಹುಷನಿಂದ ಸಲ್ಲದ ಬಯಕೆ ಅನರ್ಥಕರ ಎಂಬ ತತ್ತ್ವ; ಅಂಬರೀಷನಿಂದ ದ್ವಾದಶೀ ಸಕಾಲ ಪಾರಣೆಯ ದೀಕ್ಷೆ; ಸಗರನಿಂದ ಯಜ್ಞಾನುಷ್ಠಾನದ ಆಸಕ್ತಿ; ಪೃಥುವಿನಿಂದ ಲೋಕಪಾಲನೆಯ ಹಿರಿಮೆ; ಧರ್ಮರಾಜನಿಂದ ಧರ್ಮಪ್ರಜ್ಞೆ; ನಳನಿಂದ ಜೂಜಾಟದ ಅನರ್ಥ; ಶ್ರೀರಾಮನಿಂದ ರಾಜರಿಗಿರಬೇಕಾದ ಸಕಲಗುಣಗಳ ಅಳವಡಿಕೆ; ಯಯಾತಿಯಿಂದ ಕಾಮೋಪಭೋಗದ ಅನರ್ಥ; ಯದುವಿನಿಂದ ಉಪದೇಶಪಡೆಯುವ ಆಸಕ್ತಿ; ವಿಭೀಷಣನಿಂದ ಪರಮಾಪತ್ಕಾಲದಲ್ಲೂ ಧರ್ಮಪ್ರಜ್ಞೆ ಕಳೆದುಕೊಳ್ಳದ ಎಚ್ಚರ; ಭರತನಿಂದ ದುಃಸಂಗ ಹೇಯ ಎಂಬ ತತ್ತ್ವ; ರಾಮತಮ್ಮ ಭರತನಿಂದ ಶ್ರೀರಾಮಭಕ್ತಿ; ಉತ್ತಾನಪಾದನಿಂದ ಪತ್ನಿ ಮೋಹದ ಅನರ್ಥ; ಧ್ರುವನಿಂದ ಧ್ರುವಪದವಿ ಎನ್ನಿಸಿದ ಮೋಕ್ಷ ಸಾಧಿಸುವ ಛಲ – ಮೊದಲಾದ ಗುಣಗಳನ್ನು ಪ್ರಾರ್ಥಿಸಿ ಅಳವಡಿಸಿಕೊಳ್ಳಬೇಕು ಎಂದರ್ಥ.

೨೨. '**ಶ್ರೀಮಾನ್**'[೧] – ಶ್ರೀಯನ್ನು ಹೊಂದಿರುವವನು ಶ್ರೀಮಾನ್. [೨]ಶ್ರೀ ಎಂಬುದಕ್ಕೆ ಲಕ್ಷ್ಮೀ ಮೊದಲಾದ ಅನೇಕ ಅರ್ಥಗಳಿವೆ; ಶ್ರೀ ಎಂಬುದಕ್ಕೆ 'ಶ್ರಯತಿ ಹರಿಂ' ಎಂಬ ನಿರ್ವಚನದಿಂದ ಶ್ರೀಹರಿಯನ್ನು ಆಶ್ರಯಿಸಿರುವಳು ಎಂದರೆ ಮಹಾಲಕ್ಷ್ಮೀ

೧. ತಿಲಕಃ ಕ್ಷುರಕಃ ಶ್ರೀಮಾನ್ । – ಇತ್ಯಮರಃ

ಶ್ರೀಮಾಂಸ್ತಿಲಕವೃಕ್ಷೇ ನಾ ಮನೋಜ್ಞೇ ಧನಿಕೇ ತ್ರಿಷು । – ಇತ್ಯಭಿಧಾನಮ್

೨. ಲಕ್ಷ್ಮೀ ಸರಸ್ವತೀ ಧಾತ್ರೀ ವರ್ಗ ಸಂಪದ್ವಿಭೂತಿಶೋಭಾಸು ।
ಉಪಕರಣ ವೇಶ ರಚನಾವಿಧಾನೇಷು ಚ ಶ್ರೀರಿತಿ ಪ್ರತಿತಾ ॥ – ಇತಿ ವ್ಯಾಡಿಃ ।

ಎಂಬುದು ಮುಖ್ಯವಾದ ಅರ್ಥ. ಇಲ್ಲಿ ಕಾಂತಿಯುಕ್ತರಾದವರು, ಶೋಭಾಯ-ಮಾನರಾದವರು ಎಂದರ್ಥ. ಶ್ರೀಮಾನ್ ಎಂಬುದು ಇತರ ಸಕಲ ರಾಜರಿಗೂ, ಅದರಂತೆ ಹಿಂದಿನ ಹಾಗೂ ಮುಂದಿನ ಶ್ಲೋಕದಲ್ಲಿ ಪ್ರಸಕ್ತರಾದ ದೇವತೆಗಳು, ಋಷಿಗಳು, ಪರ್ವತ, ನದಿಗಳು ಮೊದಲಾಗಿ ಎಲ್ಲರಿಗೂ ಸಹ ಯಥೋಚಿತವಾಗಿ ಅನ್ವಯಿಸುವುದು.

೨೩. [1]**'ರಾಜಾ'** ಎಂದರೆ – 'ರಾಜೃ ದೀಪ್ತೌ' ಎಂಬ ಧಾತುಕೋಶದಿಂದ ಪ್ರಕಾಶಮಾನನಾದವನು ಎಂದರ್ಥ, ರಾಜ ಎಂದೂ ಅರ್ಥ; ಚಕ್ರವರ್ತಿಗೂ ಅನ್ವಯಿಸುವ ಪದ ಇದು ಎಂಬುದು ವಿಶೇಷ. ಧರ್ಮರಾಜ ಚಕ್ರವರ್ತಿ ಎಂಬುದು ಪ್ರಸಿದ್ಧವೇ ಆದ ವಿಚಾರ. ಈ ರಾಜ ಎಂಬ ವಿಶೇಷಣವನ್ನು ಮಾಂಧಾತೃ ಮೊದಲಾದವರಿಗೆ ಯಥೋಚಿತವಾಗಿ ಅನ್ವಯಿಸಿಕೊಳ್ಳಬೇಕು.

೨೪. ಮಾಂಧಾತ ಮೊದಲಾದ ಪುಣ್ಯಶ್ಲೋಕರಾದ ರಾಜರು ಭಗವತ್ಪ್ರೀತಿಗಾಗಿ ತಮ್ಮ ಹಿತವನ್ನು ಪರಿತ್ಯಾಗ ಮಾಡಿ, ಲೋಕದ ಸಕಲ ಜನರ ಹಿತವನ್ನು ಕಾಪಾಡಿದವರು. ಶಿಬಿ ಮೊದಲಾದ ರಾಜರಂತೂ ತಮ್ಮ ದೇಹದ ಮಾಂಸವನ್ನೇ ಕತ್ತರಿಸಿಕೊಟ್ಟು ತಮ್ಮ ಆಶ್ರಿತರನ್ನು ರಕ್ಷಿಸುವ ಕಾರ್ಯದಲ್ಲಿ ತೊಡಗಿದವರು. ಅವರೆಲ್ಲ ಮೂಲತಃ ತತ್ತ್ವಜ್ಞಾನಿಗಳಾಗಿದ್ದ ಮಹಾನುಭಾವರು. ನಾಭಾಗ ರಾಜ ಮೊದಲಾದವರು ವೇದದ್ರಷ್ಟಾರ ಋಷಿಗಳೂ ಆಗಿದ್ದರು ಎಂಬುದು ಅವರ ಹಿರಿಮೆಗೆ ದ್ಯೋತಕ. ಗತಿಸಿ ಅಸಂಖ್ಯ ವರ್ಷಗಳೇ ಕಳೆದಿದ್ದರೂ ಅವರ ಆಳ್ವಿಕೆಯ ಫಲ ನಮ್ಮನ್ನು ರಕ್ಷಿಸುತ್ತಿದೆ ಎಂಬುದು ವಿಶೇಷ.

೨೫. ಗರುಡಪುರಾಣದ ಈ ಕೆಳಗಿನ ಶ್ಲೋಕದ ಪ್ರಭಾವವನ್ನು ಇಲ್ಲಿ ಗುರುತಿಸಬಹುದು:

> ಮಾಂಧಾತಾ ನಹುಷೋಽಂಬರೀಷಸಗರೌ ರಾಜಾ ನಲೋ ಧರ್ಮರಾಟ್
> ಪ್ರಹ್ಲಾದಃ ಕ್ರತುರಾಡ್ ವಿಭೀಷಣಗಯೌ ವ್ಯಾಸೋ ಹನೂಮಾನಪಿ।
> ಅಶ್ವತ್ಥಾಮಕೃಪಾವುಮಾ ದ್ರುಪದಜಾ ಶ್ರೀಜಾನಕೀ ತಾರಕಾ
> ಮಂದೋದರ್ಯಖಿಲಾಃ ಪ್ರಭಾತಸುಮಹಂ ಕುರ್ವಂತು ನಿತ್ಯಂ ಹರೇ॥
>
> – ಗರುಡಪುರಾಣ (ಬ್ರಹ್ಮಕಾಂಡ–೨೬/೧೨)

*****

೧. ರಾಜಾ ಪ್ರಭೌ ಚ ನೃಪತೌ ಕ್ಷತ್ರಿಯೇ ರಜನೀಪತೌ।
ಯಕ್ಷೇ ಶಕ್ರೇ ಚ ಪುಂಸಿ ಸ್ಯಾತ್ ।....... – ಇತಿ ಮೇದಿನೀ.
ರಾಜಾ ತು ಪ್ರಣತಾಶೇಷಸಾಮಂತಃ ಸ್ಯಾದಧೀಶ್ವರಃ। – ಇತ್ಯಮರಃ।

- ೫ -

## ಪಾಪ ತೊಡೆವ ಪರ್ವತಗಳು

**ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ ಕೈಲಾಸಶೈಲಸ್ತಥಾ**
**ಮಾಹೇಂದ್ರೋ ಮಲಯಶ್ಚ ವಿಂಧ್ಯನಿಷಧೌ ಸಿಂಹಸ್ತಥಾ ರೈವತಃ।**
**ಸಹ್ಯಾದ್ರಿರ್ವರಗಂಧಮಾದನಗಿರಿರ್ಮೈನಾಕಗೋಮಂತಕೌ**
**[1]ಇತ್ಯಾದ್ಯಾ ಭುವಿ [2]ಭೂಧರಾಃ[3] ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥**

**ಪದಚ್ಛೇದ: ಶ್ರೀಮೇರುಃ, ಹಿಮವಾನ್, ಚ, ಮಂದರಗಿರಿಃ, ಕೈಲಾಸಶೈಲಃ, ತಥಾ, ಮಾಹೇಂದ್ರಃ, ಮಲಯಃ, ಚ, ವಿಂಧ್ಯನಿಷಧೌ, ಸಿಂಹಃ, ತಥಾ, ರೈವತಃ, ಸಹ್ಯಾದ್ರಿಃ, ವರಗಂಧಮಾದನಗಿರಿಃ, ಮೈನಾಕಗೋಮಂತಕೌ, ಇತ್ಯಾದ್ಯಾಃ, ಭುವಿ, ಭೂಧರಾಃ, ಪ್ರತಿದಿನಂ, ಕುರ್ವಂತು, ನಃ, ಮಂಗಲಮ್.**

**ಅನು: ಶೋಭಾಯಮಾನವಾದ ಮೇರುಪರ್ವತ, ಹಿಮಾಲಯ, ಮಂದರಗಿರಿ, ಅದರಂತೆ ಕೈಲಾಸಪರ್ವತ, ಮಾಹೇಂದ್ರಪರ್ವತ, ಮಲಯ-ಪರ್ವತ, ವಿಂಧ್ಯಪರ್ವತ, ನಿಷಧಪರ್ವತ, ಸಿಂಹಾಚಲ, ರೈವತಪರ್ವತ, ಸಹ್ಯಾದ್ರಿ, ಶ್ರೇಷ್ಠವಾದ ಗಂಧಮಾದನಪರ್ವತ, ಮೈನಾಕಪರ್ವತ, ಗೋಮಂತಪರ್ವತ ಇವೇ ಮೊದಲಾದ ಭೂಮಿಯಲ್ಲಿನ ಪರ್ವತಗಳು ಪ್ರತಿದಿನದಲ್ಲೂ ನಮಗೆ ಮಂಗಳವನ್ನು ಉಂಟುಮಾಡಲಿ.**

ವಿ. ೧: ಈ ಶ್ಲೋಕದಲ್ಲಿ ಪರ್ವತಗಳ ಉಲ್ಲೇಖ ಹಾಗೂ ಅವುಗಳಿಂದ ಮಂಗಳಾಶಂಸನೆ ಬಂದಿವೆ.

೨. ಇಲ್ಲಿ ಪರ್ವತಗಳು ಎಂಬುದಕ್ಕೆ ಬ್ರಹ್ಮಸೂತ್ರದ ಅಭಿಮಾನಿವ್ಯಪದೇಶಾಧಿ-ಕರಣದಲ್ಲಿ ಬಂದಿರುವಂತೆ ಅವುಗಳ ಅಭಿಮಾನಿದೇವತೆಗಳು ಎಂದು ತಿಳಿಯಬೇಕು.

---

೧. ಪುಣ್ಯಂ ತ್ರಿಲೋಕವಿಖ್ಯಾತಂ ಸರ್ವಪಾಪಹರಂ ಶಿವಮ್।
ಹಿಮವಾನ್ ಪರ್ವತಶ್ಚೈವ ದಿವ್ಯೌಷಧಿಸಮನ್ವಿತಃ।
ಮೇರುರ್ಮಹೇಂದ್ರೋ ಮಲಯಃ ಶ್ವೇತಶ್ಚ ರಜತಾವೃತಃ॥
ಶೃಂಗವಾನ್ ಮಂದರೋ ನೀಲೋ ನಿಷಧೋ ದರ್ದುರಸ್ತಥಾ।
ಚಿತ್ರಕೂಟೋಽಜನಾಭಶ್ಚ ಪರ್ವತೋ ಗಂಧಮಾದನಃ॥
ಪುಣ್ಯೋ ಸೋಮಗಿರಿಶ್ಚೈವ ತಥೈವಾನ್ಯೇ ಮಹೀಧರಾಃ।
ದಿಶಶ್ಚ ವಿದಿಶಶ್ಚೈವ ಕ್ಷಿತಿಃ ಸರ್ವೇ ಮಹೀರುಹಾಃ॥ – ಮಹಾಭಾರತ (ಅ.ಪ/೧೬೫/೩೧-೩೩)

೨. ಭೂಧರಾಶ್ಚ ಸತತಂ (ಪಾ.)

೩. ಭರತವರ್ಷದಲ್ಲಿನ ಪರ್ವತಗಳ ವಿವರ ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಬಂದಿದೆ:

೩. '**ಶ್ರೀಮೇರುಪರ್ವತ**'ವು ಪರ್ವತಗಳಲ್ಲಿ ಅತಿಶ್ರೇಷ್ಠವಾದಂತಹ ಮಹಾಪರ್ವತ; ಸುಮೇರು ಇದರ ನಾಮಾಂತರ. ಸೂರ್ಯನ ಚಲನೆ ಮೊದಲಾದ ಸಕಲವನ್ನೂ ಸಹ ಇದನ್ನು ಕೇಂದ್ರವಾಗಿಸಿಯೇ ಅರ್ಥಮಾಡಿಕೊಳ್ಳಬೇಕು ಎಂದು ಪುರಾಣಗಳು ತಿಳಿಸಿವೆ. ಇದು ಚಿನ್ನದ ಪರ್ವತ. ವೇಂಕಟಾದ್ರಿ ಮೂಲತಃ ಇದರ ಒಂದು ಶಿಖರವಾದ ಆನಂದಾದ್ರಿ. ಅದರಂತೆ ಇತರ ಅನೇಕ ಪ್ರಖ್ಯಾತ ಪರ್ವತಗಳು ಇದರ ಕೆಲವು ಶೃಂಗಗಳು ಮಾತ್ರ. ಮೇರುಪರ್ವತವು ಪರ್ವತರಾಜ ಎಂಬುದನ್ನು ಶ್ರೀಕಾರದಿಂದ ಸೂಚಿಸಿರುವರು. [೧]ಭೂಮಿಯಲ್ಲಿ ಮೇರುಪರ್ವತದಲ್ಲಿ ಶ್ರೀಬ್ರಹ್ಮದೇವರಿಗೆ ಒಂದು ನೆಲೆ ಇರುವುದು ಇದರ

---

೧. ಯೇಷಾಂ ಮಧ್ಯೇ ಇಳಾವೃತನಾಮಾಭ್ಯಂತರವರ್ಷಂ। ಯಸ್ಯ ನಾಭ್ಯಾಮವಸಿತಃ ಸರ್ವತಃ ಸೌವರ್ಣಃ ಕುಲಗಿರಿರಾಜೋ ಮೇರುರ್ದ್ವೀಪಾಯಾಮಸಮುನ್ನಾಹಃ। ಕರ್ಣಿಕಾಭೂತಃ ಕುವಲಯಕಮಲಕೋಶಸ್ಯ ಮೂರ್ಧ್ನಿ ದ್ವಾತ್ರಿಂಶತ್ಸಹಸ್ರ ಯೋಜನವಿತತೋ ಮೂಲೇ ಷೋಡಶಸಾಹಸ್ರಸ್ತಾವತಾಽಂತರ್ಭೂಮ್ಯಾಂ ಪ್ರವಿಷ್ಟಃ। – ಶ್ರೀಮದ್ಭಾಗವತ (೫/೧೬/೬,೭)

ಜಂಬೂದ್ವೀಪಃ ಸಮಸ್ತಾನಾಮೇತೇಷಾಂ ಮಧ್ಯಸಂಸ್ಥಿತಃ।
ತಸ್ಯಾಪಿ ಮೇರುರ್ಮೈತ್ರೇಯ ಮಧ್ಯೇ ಕನಕಪರ್ವತಃ॥
ಚತುರಾಶೀತಿಸಾಹಸ್ರೋ ಯೋಜನೈರಸ್ಯ ಚೋಚ್ಛ್ರಯಃ॥
ಪ್ರವಿಷ್ಟಃ ಷೋಡಶಾಧಸ್ತಾದ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ।
ಮೂಲೇ ಷೋಡಶಸಾಹಸ್ರೋ ವಿಸ್ತಾರಸ್ತಸ್ಯ ಸರ್ವಶಃ॥
ಭೂಪದ್ಮಸ್ಯಾಸ್ಯ ಶೈಲೋಽಸೌ ಕರ್ಣಿಕಾಕಾರಸಂಸ್ಥಿತಃ॥
ಹಿಮವಾನ್ ಹೇಮಕೂಟಶ್ಚ ನಿಷಧಶ್ಚಾಸ್ಯ ದಕ್ಷಿಣೇ।
ನೀಲಃ ಶ್ವೇತಶ್ಚ ಶೃಂಗೀ ಚ ಉತ್ತರೇ ವರ್ಷಪರ್ವತಾಃ॥ .......
ಶೀತಾಂಭಶ್ಚ ಕುಮುಂದಶ್ಚ ಕುರರೀ ಮಾಲ್ಯವಾಂಸ್ತಥಾ।
ವೈಕಂಕಪ್ರಮುಖಾ ಮೇರೋಃ ಪೂರ್ವತಃ ಕೇಸರಾಚಲಾಃ॥
ತ್ರಿಕೂಟಃ ಶಿಶಿರಶ್ಚೈವ ಪತಂಗೋ ರುಚಕಸ್ತಥಾ।
ನಿಷದಾದ್ಯಾ ದಕ್ಷಿಣತಸ್ತಸ್ಯ ಕೇಸರಪರ್ವತಾಃ॥
ಶಿಖಿವಾಸಾಃ ಸವೈಡೂರ್ಯಃ ಕಪಿಲೋ ಗಂಧಮಾದನಃ।
ಜಾರುಧಿಪ್ರಮುಖಾಸ್ತದ್ವತ್ಪಶ್ಚಿಮೇ ಕೇಸರಾಚಲಾಃ॥
ಮೇರೋರನಂತರಾಂಗೇಷು ಜಠರಾದಿಷ್ವವಸ್ಥಿತಾಃ।
ಶಂಖಕೂಟೋಽಥ ಋಷಭೋ ಹಂಸೋ ನಾಗಸ್ತಥಾ ಪರಃ।
ಕಾಲಂಜಾದ್ಯಾಶ್ಚ ತಥಾ ಉತ್ತರೇ ಕೇಸರಾಚಲಾಃ॥
ಚತುರ್ದಶಸಹಸ್ರಾಣಿ ಯೋಜನಾನಾಂ ಮಹಾಪುರೀ।
ಮೇರೋರುಪರಿ ಮೈತ್ರೇಯ ಬ್ರಹ್ಮಣಃ ಪ್ರಥಿತಾ ದಿವಿ॥ .....
ಆನೀಲನಿಷಧಾಯಾಮೌ ಮಾಲ್ಯವದ್ಗಂಧಮಾದನೌ।
ತಯೋರ್ಮಧ್ಯಗತೋ ಮೇರುಃ ಕರ್ಣಿಕಾಕಾರಸಂಸ್ಥಿತಃ॥.....
ಜಠರೋ ಹೇಮಕೂಟಶ್ಚ ಮರ್ಯಾದಾಪರ್ವತಾವುಭೌ।
ತೌ ದಕ್ಷಿಣೋತ್ತರಾಯಾಮಾವಾನೀಲನಿಷಧಾಯತೌ॥

ಹಿರಿಮೆಗೆ ಮತ್ತೊಂದು ರೀತಿಯ ಕಾರಣ[೧]. ಇದು ಶಿಖರಿಗಳ ರಾಜ ಎಂಬ ಮಾತು ಭಗವದ್ಗೀತೆಯಲ್ಲಿ ಬಂದಿದೆ: ಮೇರುಃ ಶಿಖರಿಣಾಮಹಮ್; ಇದರಲ್ಲಿ ಮೇರುನಾಮಕ ಭಗವಂತನ ವಿಭೂತಿರೂಪವಿದೆ. ಮೇರುಪರ್ವತದ ಒಂಭತ್ತು ಹೆಣ್ಣುಮಕ್ಕಳಲ್ಲಿ ಹಿರಿಯಳಾದ ಮೇರುದೇವಿಯನ್ನು ಪ್ರಿಯವ್ರತನ ಮೊಮ್ಮಗನಾದ ನಾಭಿರಾಜ ವಿವಾಹವಾಗುತ್ತಾನೆ; ಮುಂದೆ ಸಾಕ್ಷಾತ್ ಭಗವಂತ ಋಷಭರೂಪದಿಂದ ಇವರ ಪುತ್ರತ್ವೇನ ಅವತಾರ ಮಾಡುತ್ತಾನೆ. ಮೇರುದೇವಿಯ ೮ ಜನ ತಂಗಿಯರನ್ನು ನಾಭಿಯ ತಮ್ಮಂದಿರಾದ ಕಿಂಪುರುಷ ಮೊದಲಾದವರು ವಿವಾಹವಾಗುವರು[೨].

೪. '**ಹಿಮಾಲಯ**'ವು ಭರತಖಂಡದ ಅತ್ಯಂತ ವಿಶಾಲವಾದ ಪರ್ವತಶ್ರೇಣಿ. ಇದರಲ್ಲಿಯ ಗೌರೀಶಂಕರವು ಜಗತ್ತಿನ ಅತ್ಯುನ್ನತವಾದ ಪರ್ವತ ಶಿಖರ. ಹಿಮಾಲಯವು ಸ್ಥಾವರಗಳಲ್ಲಿ ಅತ್ಯಂತ ಹಿರಿದಾದುದು: ಸ್ಥಾವರಾಣಾಂ ಹಿಮಾಲಯಃ; ಇದರಲ್ಲಿ ಹಿಮಾಲಯ ನಾಮಕ ಭಗವಂತನ ವಿಭೂತಿರೂಪವಿದೆ ಎಂಬ ವಿವರ ಭಗವದ್ಗೀತೆಯಲ್ಲಿದೆ. ಹಿಮಾಲಯದ ಅಧಿಪತಿಯ ಪುತ್ರಿಯಾಗಿಯೇ ಪಾರ್ವತಿಯು ಜನಿಸಿದಳು. ರುದ್ರದೇವರು ಇವನ ಅಳಿಯ. ಮೇನಾದೇವಿ ಹಿಮಾಲಯನ ಪತ್ನಿ. ಗಂಗಾದಿ ಅನೇಕ ತೀರ್ಥಗಳ ಉಗಮಸ್ಥಾನ ಎಂಬುದು ಇದರ ಪ್ರಸಿದ್ಧಿ.

೫. '**ಮಂದರ**'ಪರ್ವತವು ಸಪ್ತ ಕುಲಪರ್ವತಗಳಲ್ಲಿ ಒಂದು. ಇದೂ ಸಹ ಚಿನ್ನದ ಪರ್ವತ. ದೇವದೈತ್ಯರು ಸಮುದ್ರಮಥನಕ್ಕೆ ಇದನ್ನು ಕಡೆಗೋಲನ್ನಾಗಿ ಉಪಯೋಗಿಸಿದರು. ರುದ್ರದೇವರ ವರದಿಂದಾಗಿ ಇದು ಇತರರಿಗೆ ಎತ್ತಲಾಗದ್ದು. ಶ್ರೀಹರಿಯು ಕೂರ್ಮರೂಪದಿಂದ ಇದನ್ನು ತನ್ನ ಬೆನ್ನ ಮೇಲೆ ಧರಿಸಿ ಸಮುದ್ರಮಥನಕ್ಕೆ ಅನುಕೂಲವನ್ನು ಕಲ್ಪಿಸಿದ. ಹಿರಣ್ಯಕಶಿಪು ತಪಸ್ಸು ಮಾಡಿದ್ದು ಮಂದರದ್ರೋಣಿಯಲ್ಲಿಯೇ.

೬. '**ಕೈಲಾಸ**' ಪರ್ವತವು ಶಿವನ ವಾಸಸ್ಥಾನ ಎಂದು ಪ್ರಸಿದ್ಧವಾದ ಅಪೂರ್ವಪರ್ವತ. ಸದಾ ಹಿಮಾಚ್ಛಾದಿತವಾದ ಇದು ರಜತಗಿರಿ ಎಂಬುದಾಗಿಯೂ ಪ್ರಸಿದ್ಧ. ಇದನ್ನು ಎತ್ತಲು

---

ಗಂಧಮಾದನಕೈಲಾಸೌ ಪೂರ್ವಪಶ್ಚಾಯತಾವುಭೌ ।
ಅಶೀತಿಯೋಜನಾಯಾಮಾವರ್ಣವಾಂತವ್ಯವಸ್ಥಿತೌ ॥
ನಿಷಧಃ ಪಾರಿಯಾತ್ರಶ್ಚ ಮರ್ಯಾದಾಪರ್ವತಾವುಭೌ ।
ಮೇರೋಃ ಪಶ್ಚಿಮದಿಗ್ಭಾಗೇ ಯಥಾ ಪೂರ್ವೇ ತಥಾ ಸ್ಥಿತೌ ॥
ತ್ರಿಶೃಂಗೋ ಜಾರುಧಿಶ್ಚೈವ ಉತ್ತರೌವರ್ಷಪರ್ವತೌ ।
ಪೂರ್ವಪಶ್ಚಾಯತಾವೇತಾವರ್ಣವಾಂತರ್ವ್ಯವಸ್ಥಿತೌ ॥ – ವಿಷ್ಣುಪುರಾಣ (೨/೩/

೧. ಪೃಥಿವ್ಯಾಂ ಬ್ರಹ್ಮಣೋ ಮೇರೌ ವೈಜಯಂತೇಽಂತರಿಕ್ಷಗಮ್ ।
ತೃತೀಯಂ ಸತ್ಯಲೋಕೇ ಚ ಸದನಂ ತ್ರಿವಿಧಂ ಸ್ಮೃತಮ್ ॥ – ಛಾಂದೋಗ್ಯಭಾಷ್ಯ

೨. ಶ್ರೀಮದ್ಭಾಗವತ (೫/೨/೨೩)

ಪ್ರಯತ್ನಿಸಿದ ರಾವಣನ ಇಪ್ಪತ್ತು ಕೈಗಳು ಇದರ ಬುಡದಲ್ಲಿ ಸಿಲುಕಿಕೊಂಡು ಅವನು ಒದ್ದಾಡಿದ. ಶಿವನನ್ನು ಪ್ರಾರ್ಥಿಸಿ ಅಪಾಯದಿಂದ ಪಾರಾದ.

೭. **'ಮಹೇಂದ್ರ'**ಪರ್ವತವು ದಕ್ಷಿಣ ಭಾರತದ ದೊಡ್ಡ ಪರ್ವತಗಳಲ್ಲೊಂದು[೨]. ಸಮುದ್ರವನ್ನು ಹಾರಲು ಹನುಮಂತ ಇದನ್ನು ಏರಿದ[೧]. ಅವನು ಮೆಟ್ಟಿದಾಗ ಅದರ ಬಹುಭಾಗ ಭೂಮಿಯಲ್ಲಿ ಅಡಗಿತು. ಶ್ರೀವಾದಿರಾಜಸ್ವಾಮಿಗಳು ತೀರ್ಥಪ್ರಬಂಧದಲ್ಲಿ ಇದನ್ನು ವರ್ಣಿಸಿರುವರು. ಇದು ಪರಶುರಾಮದೇವರ ವಿಶೇಷ ಸನ್ನಿಧಿಗೆ ಪಾತ್ರವಾದ ಪರ್ವತ.

೮. **'ಮಲಯ'** ಪರ್ವತವು ಶ್ರೀಗಂಧಕ್ಕೆ ಹೆಸರಾದ ಅಪೂರ್ವಪರ್ವತ. ಇದು ಸಹ್ಯ ಪರ್ವತದ ದಕ್ಷಿಣದ ಭಾಗ. ಇದರಿಂದ ಬೀಸುವ ಗಾಳಿ ಮಲಯಮಾರುತ ಎಂದೇ ಪ್ರಸಿದ್ಧ.

೯. **'ವಿಂಧ್ಯ'**ಪರ್ವತವು ಹಿಮಾಲಯದ ಬಳಿಕ ದೊಡ್ಡದೆನ್ನಿಸಿರುವ ಪರ್ವತ ಶ್ರೇಣಿ. ಉತ್ತರ ಹಾಗೂ ದಕ್ಷಿಣ ಭಾರತಗಳನ್ನು ಇದು ಪ್ರತ್ಯೇಕಿಸುತ್ತದೆ. ನರ್ಮದಾ ಹಾಗೂ ಅನೇಕ ನದಿಗಳ ಉಗಮಸ್ಥಾನ ಇದಾಗಿದೆ. ಅಗಸ್ತ್ಯರಿಂದಾಗಿ ಇದರ ಬೆಳವಣಿಗೆ ಸ್ಥಗಿತವಾಯಿತು ಎಂದು ಪೌರಾಣಿಕ ಪ್ರಸಿದ್ಧಿ.

೧೦. **'ನಿಷಧ'** ಎಂಬುದು ಮತ್ತೊಂದು ಪರ್ವತ. ಪಾಂಡವರು ವನವಾಸ ಕಾಲದಲ್ಲಿ ಇದನ್ನು ದಾಟಿ ಮುಂದುವರೆದರು ಎಂಬ ಉಲ್ಲೇಖ ಮಹಾಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ. ನಿಷಧ ಪರ್ವತದ ಉಲ್ಲೇಖ ಮಹಾಭಾರತ ಹಾಗೂ ತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ[೩]. ಅದರಿಂದ ತಿಳಿಯುವಂತೆ ಇದು ಕೈಲಾಸ ಹಾಗೂ ಹೇಮಕೂಟಗಳ ಅನಂತರ ಬರುವ ಪರ್ವತ.

೧೧. **'ಸಿಂಹ'** ಎಂದರೆ ಸಿಂಹಾಚಲ ಎಂದರ್ಥ. ಇದು ವಿಶಾಖಪಟ್ಟಣದ ಬಳಿ ಇರುವ ಪರ್ವತ. ವರಾಹನರಸಿಂಹರೂಪದ ಶ್ರೀಹರಿ ಇಲ್ಲಿ ಪೂಜಿಸಲ್ಪಡುವ ದೇವತೆ. ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀನರಹರಿತೀರ್ಥರು ಇಲ್ಲಿಯ ದೇವರಿಗೆ ವಿಶೇಷ ಸೇವೆ ಸಲ್ಲಿಸಿದ ವಿವರ ಶಾಸನಗಳಿಂದ ತಿಳಿದು ಬರುತ್ತದೆ.

೧೨. **'ರೈವತ'**ಪರ್ವತವು ದ್ವಾರಕೆಯ ಬಳಿ ಇದ್ದ ಪರ್ವತ. ಇದು ಯಾದವರ ಕ್ರೀಡಾಂಗಣ ಎಂದು ಪ್ರಸಿದ್ಧವಾಗಿತ್ತು. ಶ್ರೀಕೃಷ್ಣನು ಸಕಲರಾಜರಿಂದ ವಂದಿತನಾಗಿ ಇಲ್ಲಿ

---

೧. ತರಣಿರಿವ ಹನೂಮಾನ್ ಪ್ರಾಪ ಲಂಕಾಂ ದಿದೃಕ್ಷುರ್ಧರಣಿ ತವ ತನೂಜಾಂ ನೈವ ಭೇತವ್ಯಮಂಬ।
ಇತಿ ಗದಿತುಮಿವಾಂತಃಪ್ರಾಟಿತೋ ಭಾತಿ ಭೂಮೇಃ ಪವನಸುತಜವೇನಾಮಂದಮಾಹೇಂದ್ರಶೈಲಃ ॥
– ತೀರ್ಥಪ್ರಬಂಧ (ದ.ಪ್ರ/೩೧)

೨. ಮಾಹೇಂದ್ರಮಾಸೇದುರಗಾಧಬೋಧಾಃ। – ಮ.ಭಾ.ತಾ.ನಿ (೬/೪೬)

೩. ಅತೀತ್ಯ ಶರ್ವಶ್ವಶುರಂ ಗಿರಿಂ ತೇ ಸುವರ್ಣಕೂಟಂ ನಿಷಧಂ ಗಿರಿಂ ಚ।
ಮೇರೋಃ ಪ್ರಾಚ್ಯಾಂ ಗಂಧಮಾದೇ ಗಿರೌ ಚ ಪ್ರಾಪುರ್ಬದಾರ್ಯಾಶ್ರಮಮುತ್ತಮಂ ಭುವಿ ॥
– ಮ.ಭಾ.ತಾ.ನಿ (೨೨/೨೭೬)

ನೆಲೆಸಿದ್ದಾಗಲೇ ಶ್ರೀನಾರದರು ಪಾರಿಜಾತ ಪುಷ್ಪವನ್ನು ಸಮರ್ಪಿಸಿದ ವಿವರ ಹರಿವಂಶದಲ್ಲಿ ಬಂದಿದೆ. ಧನ್ಯಾಶ್ಚರ್ಯೋಪಾಖ್ಯಾನ ನಡೆದದ್ದು ಇಲ್ಲಿಯೇ. ಅರ್ಜುನ ಈ ಪರ್ವತಕ್ಕೆ ಆಗಮಿಸಿದಾಗಲೆ ಸುಭದ್ರೆಯನ್ನು ಪಡೆಯಲೋಸುಗ ಯತಿವೇಷವನ್ನು ಧರಿಸಿದ್ದು. ಕುಂತಿಯ ಪ್ರಾರ್ಥನೆಯಂತೆ ಶ್ರೀಕೃಷ್ಣನು ತನ್ನ ಸರ್ವೋತ್ತಮತ್ವವನ್ನು ವಿಶೇಷ ರೀತಿಯಲ್ಲಿ ಪ್ರಕಟಪಡಿಸಿದ್ದು ಸಹ ಈ ಪರ್ವತದಲ್ಲಿಯೇ.

೧೩. 'ಸಹ್ಯಾದ್ರಿ'ಯು ಪಶ್ಚಿಮಘಟ್ಟಗಳಲ್ಲಿನ ಪರ್ವತ. ಇದರ ವರ್ಣನೆ ತೀರ್ಥ-ಪ್ರಬಂಧದಲ್ಲಿ ಬಂದಿದೆ[೧]. ಶ್ರೀಮದಾಚಾರ್ಯರು ಈ ಸ್ಥಳಕ್ಕೆ ಸಂದರ್ಶನ ನೀಡಿದ್ದ ವಿವರ ಮಧ್ವವಿಜಯದಲ್ಲಿದೆ[೨]. ಶರಾವತಿ ಮೊದಲಾದ ನದಿಗಳು ಇದರಿಂದ ಹುಟ್ಟಿ ಪಶ್ಚಿಮ ಸಮುದ್ರವನ್ನು ಸೇರುವವು. ಪ್ರಹ್ಲಾದನು ಈ ಪರ್ವತದ ಬಳಿಯಲ್ಲಿಯೇ ಅಜಗರ ಮುನಿಯನ್ನು ಸಂದರ್ಶಿಸಿದ ವಿವರ ಶ್ರೀಮದ್ಭಾಗವತಪುರಾಣದಲ್ಲಿ ಬಂದಿದೆ.

೧೪. '**ಗಂಧಮಾದನ**'ವು ಬಗೆಬಗೆಯ ಔಷಧಿಗಳಿಂದ ಯುಕ್ತವಾದ ವಿಶಿಷ್ಟ ಪರ್ವತ. ಮೃತಸಂಜೀವನೀ, ಸಂಧಾನಕರಣೀ, ವಿಶಲ್ಯಕರಣೀ, ಸವರ್ಣಕರಣೀ ಎಂಬ ನಾಲ್ಕು ಮೂಲಿಕೆಗಳು ಇದ್ದದ್ದು ಈ ಪರ್ವತದಲ್ಲಿಯೇ. ಶ್ರೀರಾಮನ ಆದೇಶದಂತೆ ಹನುಮಂತನು ಈ ಮೂಲಿಕೆಗಳಿದ್ದ ಈ ಪರ್ವತದ ಒಂದು ಭಾಗವನ್ನು ಕಿತ್ತಿ ಲಂಕೆಗೆ ಒಯ್ದು ಕಪಿಗಳನ್ನು ಬದುಕಿಸಿದ. ಇನ್ನೊಂದು ಪ್ರಸಂಗದಲ್ಲಿ ಮತ್ತೊಮ್ಮೆ ಇದನ್ನು ಹಾಗೆ ಕಿತ್ತಿ ಲಕ್ಷ್ಮಣನನ್ನು ಸಂರಕ್ಷಿಸಿ ಲಕ್ಷ್ಮಣಪ್ರಾಣದಾತಾ ಎಂಬ ಹಿರಿಮೆಗೆ ಪಾತ್ರನಾದ. ಪಾಂಡವರು ತಮ್ಮ ವನವಾಸ ಕಾಲದಲ್ಲಿ ಇದರಲ್ಲಿ ಕೆಲಕಾಲ ನೆಲೆಸಿದ್ದ ವಿವರ ಮಹಾಭಾರತ ಹಾಗೂ ತಾತ್ಪರ್ಯನಿರ್ಣಯದಲ್ಲಿ ಬಂದಿದೆ (೨೨/೨೭೩). ಇದು ಕೈಲಾಸ, ಹೇಮಕೂಟ, ನಿಷಧಗಿರಿಗಳ ಬಳಿಕ ಮೇರುಪರ್ವತದ ಪೂರ್ವದಲ್ಲಿರುವ ವಿಶಿಷ್ಟವಾದ ಪರ್ವತ. ಇದರ ಶಿಖರದಲ್ಲಿದ್ದ ಸೌಗಂಧಿಕಪುಷ್ಪ ಹಾಗೂ ಪಂಚವರ್ಣದ ಪುಷ್ಪಗಳನ್ನು ಭೀಮಸೇನ ದ್ರೌಪದಿಯ ಕೋರಿಕೆಯಂತೆ ತಂದು ನೀಡಿದ. ಅವುಗಳ ರಕ್ಷಣೆಗೆಂದು ನಿಯಮಿತರಾಗಿದ್ದ ಮಣಿಮಂತ ಮೊದಲಾದ ಅಸಂಖ್ಯ ರಾಕ್ಷಸರನ್ನು ಸಂಹರಿಸಿದ. ಅದು ಅವನ ಜೀವೋತ್ತಮತ್ವವನ್ನು ಪ್ರಕಟಿಸುವ ಒಂದು ಅಪೂರ್ವ ಘಟನೆಯಾಯಿತು.

೧೫. '**ಮೈನಾಕ**' ಪರ್ವತವು ಹಿಮಾಲಯದ ಪುತ್ರ; ಪಾರ್ವತಿಯ ಸೋದರ; ರುದ್ರದೇವರ ಮೈದುನ. ಇದು ಸಹ ಚಿನ್ನದ ಪರ್ವತ: 'ಹೈಮೋ ಗಿರಿಃ' (ಮ.ಭಾ.ತಾ.ನಿ

---

೧. ಸಹ್ಯೋಽಪ್ಯಸಹ್ಯೋಽಸಿ ಗಿರೇ ಪಾಪಾನಾಮಸ್ತು ತತ್ ತಥಾ।
ಅಚಲಸ್ತ್ವಂ ಚಲಸಿ ಮನ್ಮನಸ್ತನ್ನ ರೋಚತೇ॥ ತೀರ್ಥಪ್ರಬಂಧ (ಪ.ಪ್ರ/೫೮)

೨. ನಿಜಶಿಷ್ಯಮುದೇಽಥ ಸಹ್ಯಮಾಪ್ತಮ್। – ಸುಮಧ್ವವಿಜಯ (೧೩/೧)

೭/೨). ಇತರ ಪರ್ವತಗಳ ರೆಕ್ಕೆಗಳೆಲ್ಲ ಇಂದ್ರದೇವರ ವಜ್ರಾಯುಧಕ್ಕೆ ಬಲಿಯಾದಾಗ ಇದು ವಾಯುದೇವರನ್ನು ಪ್ರಾರ್ಥಿಸಿ ತನ್ನ ರೆಕ್ಕೆಗಳನ್ನು ಉಳಿಸಿಕೊಂಡಿತು. ಶ್ರೀವಾಯುದೇವರ ಅನುಗ್ರಹದಿಂದ ದಕ್ಷಿಣ ಸಮುದ್ರದಲ್ಲಿ ನೆಲೆಸಿದ್ದ ಇದು ಹನುಮಂತ ಸಮುದ್ರ ಹಾರುವಾಗ ಮೇಲೆದ್ದು ಬಂದು ತನ್ನ ಸೇವೆಯನ್ನು ಸಲ್ಲಿಸಿತು. ಹನುಮಂತ ಅದರ ಬಳಿ ವಿಶ್ರಾಂತಿಯನ್ನೇನು ತೆಗೆದುಕೊಳ್ಳಲಿಲ್ಲ. ಆದರೆ, ಅದರ ಸಂತೋಷಕ್ಕೆಂದು ಅದನ್ನು ಆಲಂಗಿಸಿಕೊಂಡು ಮುಂದೆ ಸಾಗಿದ. ಆ ಬಳಿಕ ಮೈನಾಕ ಪರ್ವತವು ಸಾಗರದ ಆಚೆಗೂ ಸಹ ಸುರಕ್ಷಿತವಾಗಿ ಸಂಚರಿಸುವಂತೆ ಇಂದ್ರ ವರ ನೀಡಿದ.

೧೬. '**ಗೋಮಂತಕ**'[೧] ಎಂಬುದು ದಕ್ಷಿಣ ಭಾರತದ ಪರ್ವತಗಲ್ಲೊಂದು. ಶ್ರೀಕೃಷ್ಣ ಬಲರಾಮನ ಸಮೇತ ಈ ಪರ್ವತವನ್ನು ಸಂದರ್ಶಿಸಿ ಅಲ್ಲಿ ಸ್ವಲ್ಪ ಹೊತ್ತು ನೆಲೆಸಿದ್ದ. ಆ ಸಂದರ್ಭದಲ್ಲಿಯೇ ಬಲಿಚಕ್ರವರ್ತಿ ಅಪಹರಿಸಿದ್ದ ನಾರಾಯಣನ ಕಿರೀಟವನ್ನು ಗರುಡ ಶ್ರೀಕೃಷ್ಣನಿಗೆ ಸಮರ್ಪಿಸಿ ಧನ್ಯನಾದ. ಅಲ್ಲಿಗೆ ಆಗಮಿಸಿದ ತನ್ನ ಪತ್ನಿಯರೊಂದಿಗೆ ಬಲರಾಮ ಕ್ರೀಡಿಸಿದ. ಜರಾಸಂಧ ಅದಕ್ಕೆ ಬೆಂಕಿ ಇಟ್ಟಾಗ ಶ್ರೀಕೃಷ್ಣ ಅದನ್ನು ತುಳಿದು ನೀರಿನಲ್ಲಿ ಮುಳುಗಿಸಿ ಬೆಂಕಿಯನ್ನು ನಂದಿಸಿದ. ಜರಾಸಂಧನ ಸೈನ್ಯದಲ್ಲಿ ಧುಮುಕಿ ಅದನ್ನು ನಾಶಪಡಿಸಿದ. ಆ ಬಳಿಕ ದಮಘೋಷನ ಪ್ರಾರ್ಥನೆಯಂತೆ ಕೊಲ್ಹಾಪುರಕ್ಕೆ ತೆರಳಿ ಅಲ್ಲಿದ್ದ ಶೃಗಾಲವಾಸುದೇವನನ್ನು ಸಂಹರಿಸಿ, ಅವನ ಪುತ್ರನಾದ ಶಕ್ರದೇವನಿಗೆ ಪಟ್ಟಾಭಿಷೇಕ ಮಾಡಿದ. ಇದು ಸಹ್ಯ ಪರ್ವತದ ಉತ್ತರಭಾಗದ ಪರ್ವತಶ್ರೇಣಿ.

೧೭. ಇಂತಹ ಪರ್ವತಗಳು ಭೂಮಿಯಲ್ಲಿ ನೆಲೆಸಿದ್ದು ಭೂಮಿಯ ಸಮತೋಲನಕ್ಕೆ ಕಾರಣವಾಗಿರುವುದರಿಂದ ಇವಕ್ಕೆ ಭೂಧರಗಳು ಎಂದು ಹೆಸರು. ಮೇಲ್ನೋಟಕ್ಕೆ ಭೂಮಿಯೇ ಇವುಗಳನ್ನು ಧರಿಸಿರುವಂತೆ ಕಾಣುವುದು. ಆದರೆ ಭೂಮಿಯನ್ನೇ ಇವು ಧರಿಸಿವೆ ಎಂಬುದು ವಾಸ್ತವ ಸಂಗತಿ. ಇದನ್ನು ಭೂಧರಾಃ ಎಂಬ ಪದದಿಂದ ಸೂಚಿಸಿರುವರು. ಧನ್ಯಾಶ್ಚರ್ಯೋಪಾಖ್ಯಾನದಲ್ಲಿ ಭೂದೇವಿಯು ಈ ಅಂಶವನ್ನು ಸ್ಫುಟಪಡಿಸಿದ ವಿವರ ಹರಿವಂಶ ಹಾಗೂ ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಬಂದಿದೆ. ಆ ಪ್ರಸಂಗದಲ್ಲಿ ಪರ್ವತ ಎಂಬುದಕ್ಕೆ ಗರುಡ–ಶೇಷ–ರುದ್ರರು ಎಂಬ ವಿಶೇಷಾರ್ಥವನ್ನು ಶ್ರೀಮದಾಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ತಿಳಿಸಿರುವರು.

೧೮. ಭೂಮಿಯಲ್ಲಿ ನೆಲೆಸಿರುವ ನಾವು ಭೂಮಿಯನ್ನು ಹೇಗೋ ಹಾಗೆ, ಆ ಭೂಮಿಯನ್ನು ಧರಿಸಿರುವ ಪರ್ವತಗಳನ್ನು ಸಹ ಪ್ರತಿನಿತ್ಯ ಸ್ತುತಿಸಬೇಕು ಎಂಬುದು

೧. ಶ್ರೀಕೃಷ್ಣನಿಗೆ ಸಂಬಂಧಿಸಿದಂತೆ ಇದರ ವಿವರಗಳು ಶ್ರೀಮದ್ಭಾಗವತ, ಮಹಾಭಾರತ, ವಿಷ್ಣುಪುರಾಣ ಹಾಗೂ ಮಹಾಭಾರತತಾತ್ಪರ್ಯನಿರ್ಣಯ ಮೊದಲಾದವುಗಳಲ್ಲಿ ಬಂದಿವೆ.

ಇಲ್ಲಿಯ ಮುಖ್ಯ ಸಂದೇಶ; ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಪೃಥ್ವಿ ಎಂಬ ಹೆಸರು ಪಾರ್ವತಿಯದು ಎಂದು ತಿಳಿಸಿ, ಪರ್ವತಗಳು ಎಂದರೆ ಗರುಡಶೇಷರುದ್ರರು ಎಂಬ ವಿಶೇಷಾರ್ಥವನ್ನು ತಿಳಿಸಲಾಗಿದೆ[೧].

೧೯. ಇದರಂತೆ ಇಲ್ಲಿ ಉಲ್ಲೇಖಿತವಾಗದ ಗೋವರ್ಧನಗಿರಿ, ವಿಮಾನಗಿರಿ[೨] ಮೊದಲಾದ ಇತರ ಅನೇಕ ಪರ್ವತಗಳನ್ನು ಸಹ ಸ್ತುತಿಸುವುದು ಕರ್ತವ್ಯ. ಶ್ರೀಮದ್ಭಾಗವತಪುರಾಣದಲ್ಲಿ ಬಂದಿರುವ ಇತರ ಪರ್ವತಗಳನ್ನು ಸಹ ಇಲ್ಲಿ ಗ್ರಹಿಸಬೇಕು[೩].

೨೦. ಇದರಲ್ಲೂ ಸಹ 'ಸಸ್ತ್ರೀಕಾಃ' ಎಂಬ ವಿಶೇಷಣವನ್ನು ಸೇರಿಸಿಕೊಂಡು ಈ ಪರ್ವತದ ಅಭಿಮಾನಿ ದೇವತೆಗಳ ಪತ್ನಿಯರು ಸಹ ಮಂಗಲವನ್ನು ಕರುಣಿಸಲಿ ಎಂದು ಪ್ರಾರ್ಥಿಸಿಕೊಳ್ಳಬೇಕು.

*****

---

೧. ಪರಾವನಾತ್ ಪರ್ವತನಾಮಧೇಯಾನ್ । – ಮ.ಭಾ.ತಾ.ನಿ (೨೦/೬೮)

೨. ಈ ವಿಮಾನಗಿರಿಯು ಉಡುಪಿ ಬಳಿಯ ಪಾಜಕಕ್ಷೇತ್ರದಲ್ಲಿರುವ ಒಂದು ಬೆಟ್ಟ ವಿಮಾನಾಕಾರದಲ್ಲಿರುವುದರಿಂದ ಅದಕ್ಕೆ ಆ ಹೆಸರು. ಇದರ ಸುತ್ತಲೂ ಪರಶುತೀರ್ಥ, ಗದಾತೀರ್ಥ, ಬಾಣತೀರ್ಥ ಮತ್ತು ಧನುಸ್ತೀರ್ಥಗಳೆಂಬ ಶ್ರೀಪರಶುರಾಮ ಪ್ರತಿಷ್ಠಿತವಾದ ನಾಲ್ಕು ತೀರ್ಥಗಳಿವೆ. ಈ ವಿಮಾನಗಿರಿಯಲ್ಲಿ ಶ್ರೀಪರಶುರಾಮದೇವರಿಂದ ಪ್ರತಿಷ್ಠಿತವಾದ ದುರ್ಗೆ ನೆಲೆಸಿರುವಳು. ಶ್ರೀಮದಾಚಾರ್ಯರು ತಮ್ಮ ಬಾಲ್ಯದ ಬಹುದಿನಗಳನ್ನು ಇಲ್ಲಿಯೇ ಕಳೆದಿದ್ದರು ಎಂದು ಮಧ್ವವಿಜಯದಿಂದ ತಿಳಿಯುವುದು. ಇದರ ವರ್ಣನೆ ತೀರ್ಥಪ್ರಬಂಧದಲ್ಲಿ ಬಂದಿದೆ:

ಪರಶ್ವಧಧನುರ್ಬಾಣಗದಾತೀರ್ಥೋಪಶೋಭಿತೇ ।
ಗಿರೌ ಯತ್ರ ಸುತಪ್ರೇಮ್ಣೇವಾಸ್ತೇ ನಿತ್ಯಂ ಹರಿಸ್ವಸಾ ॥
ತ್ರಿಶೂಲಧಾರಿಣೇ ದೈತ್ಯಗಜಕುಂಭವಿದಾರಿಣೇ ।
ಗಿರೀಂದ್ರಶಿಖರಾವಾಸಾ ದುರ್ಗಾ ಸ್ವರ್ಗಾಪವರ್ಗದಾ ॥
ಪ್ರಲಯೇ ಜಲದುರ್ಗಾಽಸಿ ಸರ್ಗಾದೌ ಗಿರಿವಿಸ್ಮೃತಿಃ ।
ಇದಾನೀಂ ಸ್ಥಲದುರ್ಗಾಽಸಿ ದುರ್ಗಾ ತ್ವಂ ಸದ್ಗುಣಾರ್ಣವೇ ॥
ದುರ್ಜ್ಞೇಯತ್ವಾದ್ದುಃಖದತ್ವಾದ್ದುಷ್ಪ್ರಾಪ್ಯತ್ವಾಚ್ಚ ದುರ್ಜನೈಃ ।
ಸತಾಮಭಯಭೂಮಿತ್ವಾದ್ದುರ್ಗಾ ತ್ವಂ ಹೃದ್ಗುಹಾಶ್ರಯಾತ್ ॥ ಪಶ್ಚಿಮಪ್ರಬಂಧ (೧೭-೨೦)

೩. ಭಾರತೇಽಪ್ಯಸ್ಮಿನ್ ವರ್ಷೇ ಸರಿಚ್ಛೈಲಾಃ ಸಂತಿ ಬಹವಃ । ಮಲಯೋ ಮಂಗಲಪ್ರಸ್ಥೋ ಮೈನಾಕಸ್ತ್ರಿಕೂಟ ಋಷಭಃ ಕೂಟಕಃ ಕೋಲ್ಲಕಃ ಸಹ್ಯೋ ವೇದಗಿರಿರ್ಋಷ್ಯಮೂಕಃ ಶ್ರೀಶೈಲೋ ವೇಂಕಟೋ ಮಹೇಂದ್ರೋ ವಾರಿಧರೋ ವಿಂಧ್ಯಃ ಶುಕ್ತಿಮಾನ್ ಋಕ್ಷಗಿರಿಃ ಪಾರಿಯಾತ್ರೋ ದ್ರೋಣಶ್ಚಿತ್ರಕೂಟೋ ಗೋವರ್ಧನೋ ರೈವತಃ ಕಕುಭೋ ನೀಲಃ ಕೋಕಾಮುಖ ಇಂದ್ರಕೀಲಃ ಕಾಮಗಿರಿರಿತಿ ಚಾನ್ಯೇ ಚ ಶತಶಃ ಸಹಸ್ರಶಃ ಶೈಲಾಸ್ತೇಷಾಂ ನಿತಂಬಪ್ರಭವಾ ನದಾ ನದ್ಯಶ್ಚ ಸಂತ್ಯಸಂಖ್ಯಾತಾಃ ॥ –ಶ್ರೀಮದ್ಭಾಗವತ (೫/೧೯/೧೬)

ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ ।
ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಃ ॥ – ವಿಷ್ಣುಪುರಾಣ (೨/೩/೩)

– ೬ –

## ಪುಣ್ಯಪ್ರದ ನದೀ-ನದಗಳು

**ಗಂಗಾ ಸಿಂಧುಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ**
**ಕೃಷ್ಣಾ ಭೀಮರಥೀ ಚ ಫಲ್ಗುಸರಯೂ ಶ್ರೀಗಂಡಕೀ ಗೋಮತೀ ।**
**ಕಾವೇರೀ ಕಪಿಲಾ [೧]ವರಾಹತನಯಾ ನೇತ್ರಾವತೀತ್ಯಾದಯೋ[೨]**
**ನದ್ಯಃ [೩]ಶ್ರೀಹರಿಪಾದಪಂಕಜಭವಾಃ ಕುರ್ವಂತು ನೋ ಮಂಗಲಮ್ ॥**

ಪದಚ್ಛೇದ : ಗಂಗಾ, ಸಿಂಧುಸರಸ್ವತೀ, ಚ, ಯಮುನಾ, ಗೋದಾವರೀ, ನರ್ಮದಾ, ಕೃಷ್ಣಾ ಭೀಮರಥೀ, ಚ, ಫಲ್ಗುಸರಯೂ, ಶ್ರೀಗಂಡಕೀ, ಗೋಮತೀ,

---

೧. ಭೂಧರಾಶ್ಚ ಸತತಂ (ಪಾ.)

೨. ಭರತಖಂಡದ ಮತ್ತುಷ್ಟು ನದಿಗಳ ಬಗ್ಗೆ ವಿವರ ಮಹಾಭಾರತದಲ್ಲಿ ಬಂದಿದೆ:
ವೈನತೇಯಾಃ ಸಮುದ್ರಾಶ್ಚ ಕದ್ರುಜಾಃ ಪನ್ನಗಾಸ್ತಥಾ ॥
ಶತದ್ರುಶ್ಚ ವಿಪಾಶಾ ಚ ಚಂದ್ರಭಾಗಾ ಸರಸ್ವತೀ ।
ಸಿಂಧುಶ್ಚ ದೇವಿಕಾ ಚೈವ ಪ್ರಭಾಸಂ ಪುಷ್ಕರಾಣಿ ಚ ॥
ಗಂಗಾ ಮಹಾನದೀ ವೇಣಾ ಕಾವೇರೀ ನರ್ಮದಾ ತಥಾ ।
ಕುಲಂಪುನಾ ವಿಶಲ್ಯಾ ಚ ಕರತೋಯಾಽಂಬುವಾಹಿನೀ ॥
ಸರಯೂರ್ಗಂಡಕೀ ಚೈವ ಲೋಹಿತಶ್ಚ ಮಹಾನದಃ ।
ತಾಮ್ರಾರುಣಾ ವೇತ್ರವತೀ ಪರ್ಣಾಶಾ ಗೌತಮೀ ತಥಾ ॥
ಗೋದಾವರೀ ಚ ವೇಣ್ಣಾ ಚ ಕೃಷ್ಣವೇಣಾ ತಥಾಽದ್ರಿಜಾ ।
ದೃಷದ್ವತೀ ಚ ಕಾವೇರೀ ಚಕ್ಷುರ್ಮಂದಾಕಿನೀ ತಥಾ ॥
ಪ್ರಯಾಗಂ ಚ ಪ್ರಭಾಸಂ ಚ ಪುಣ್ಯಂ ನೈಮಿಷಮೇವ ಚ ।
ತಚ್ಚ ವಿಶ್ವೇಶ್ವರಸ್ಥಾನಂ ಯತ್ರ ತದ್ವಿಮಲಂ ಸರಃ ॥
ಪುಣ್ಯತೀರ್ಥೈ ಸುಸಲಿಲಂ ಕುರುಕ್ಷೇತ್ರಂ ಪ್ರಕೀರ್ತಿತಮ್ ।
ಸಿಂಧೂತ್ತಮಂ ತಪೋದಾನಂ ಜಂಬೂಮಾರ್ಗಮಥಾಪಿ ಚ ॥
ಹಿರಣ್ವತೀ ವಿತಸ್ತಾ ಚ ತಥಾ ಪ್ಲಕ್ಷವತೀ ನದೀ ।
ವೇದಸ್ಮೃತಿರ್ವೇದವತೀ ಮಾಲವಾಥಾಶ್ವವತ್ಯಪಿ ॥
ಭೂಮಿಭಾಗಾಸ್ತಥಾ ಪುಣ್ಯಾ ಗಂಗಾದ್ವಾರಮಥಾಪಿ ಚ ।
ಋಷಿಕುಲ್ಯಾಸ್ತಥಾ ಮೇಧ್ಯಾ ನದ್ಯಃ ಸಿಂಧುವಹಾಸ್ತಥಾ ॥
ಚರ್ಮಣ್ವತೀ ನದೀ ಪುಣ್ಯಾ ಕೌಶಿಕೀ ಯಮುನಾ ತಥಾ ।
ನದೀ ಬೀಮರಥೀ ಚೈವ ಬಾಹುದಾ ಚ ಮಹಾನದೀ ॥
ಮಾಹೇಂದ್ರವಾಣೀ ತ್ರಿದಿವಾ ನೀಲಿಕಾ ಚ ಸರಸ್ವತೀ ।
ನಂದಾ ಚಾಪರನಂದಾ ಚ ತಥಾ ತೀರ್ಥಮಹಾಹ್ರದಃ ॥
ಗಯಾಥ ಫಲ್ಗುತೀರ್ಥಂ ಚ ಧರ್ಮಾರಣ್ಯಂ ಸುರೈರ್ವೃತಮ್ ।
ತಥಾ ದೇವನದೀ ಪುಣ್ಯಾ ಸರಶ್ಚ ಬ್ರಹ್ಮನಿರ್ಮಿತಮ್ ॥ – ಮಹಾಭಾರತ (ಆ.ಪ/೧೬೫/೧೮–೨೯)

೩. ಶ್ರೀಹರಿಪಾದಪಂಕಜಭುವಃ (ಪಾ.)

ಕಾವೇರೀ, ಕಪಿಲಾ, ವರಾಹತನಯಾ, ನೇತ್ರಾವತೀ, ಇತ್ಯಾದಯಃ, ನದ್ಯಃ, ಶ್ರೀಹರಿಪಾದಪಂಕಜಭವಾಃ, ಕುರ್ವಂತು, ನಃ, ಮಂಗಲಮ್.

**ಅನು: ಗಂಗೆ, ಸಿಂಧು ಮತ್ತು ಸರಸ್ವತೀ, ಯಮುನೆ, ಗೋದಾವರೀ, ನರ್ಮದೆ, ಕೃಷ್ಣವೇಣೀ, ಭೀಮರಥೀ, ಫಲ್ಗು, ಸರಯೂ, ಶ್ರೀಗಂಡಕೀ, ಗೋಮತೀ, ಕಾವೇರೀ, ಕಪಿಲಾ, ತುಂಗಭದ್ರಾ, ನೇತ್ರಾವತೀ ಇವೇ ಮೊದಲಾದ ಶ್ರೀಹರಿಯ ಪಾದಕಮಲದಿಂದ ಜನಿಸಿದಂತಹ ನದಿಗಳು ನಮಗೆ ಸದಾ ಮಂಗಲವನ್ನುಂಟುಮಾಡಲಿ.**

ವಿ. ೧: ಈ ಶ್ಲೋಕದಲ್ಲಿ ನದಿಗಳಿಂದ ಮಂಗಲಾಶಂಸನೆ ಪ್ರಾರ್ಥಿತವಾಗಿದೆ.

೨. ಗಂಗಾ ಮೊದಲಾದ ನದಿಗಳು ಎಂದರೆ, ಆ ನದಿ ಅಭಿಮಾನಿದೇವತೆಗಳಾದ ಗಂಗಾ ಮೊದಲಾದ ಹೆಸರಿನ ದೇವತಾಸ್ತ್ರೀಯರು ಎಂದರ್ಥ; ಹಿಮಾಲಯಾದಿ ಪರ್ವತಗಳ ಪ್ರಾರ್ಥನೆಯಲ್ಲಿ ಹೇಗೋ ಹಾಗೆ. 'ನ ಗಂಗಾ ಸದೃಶೋ ತೀರ್ಥಮ್' ಎಂಬುದು ಇದರ ವಿಶೇಷವಾದ ಹಿರಿಮೆ.

೩. '**ಗಂಗೆ**' ದೇವನದಿ ಎಂದು ಖ್ಯಾತವಾದ ಅಪೂರ್ವ ನದಿ[೧]. ವಿಷ್ಣುಪಾದೋದ್ಭವೆ ಎಂಬುದು ಇದರ ಅಸಾಧಾರಣವಾದ ಹಿರಿಮೆ. ಶ್ರೀಹರಿಯು ವಾಮನರೂಪದಿಂದ ಬಲಿಯನ್ನು ಮೂರು ಹೆಜ್ಜೆ ಬೇಡಿ, ತ್ರಿವಿಕ್ರಮರೂಪದಿಂದ ತನ್ನ ಒಂದು ಕಾಲನ್ನು ಮೇಲೆತ್ತಿದಾಗ ಅದರ ಹೆಬ್ಬೆರಳಿನ ಉಗುರಿನ ತುದಿ ಬ್ರಹ್ಮಾಂಡ ಕರ್ಪರವನ್ನು ಭೇದಿಸಿತು. ಒಳಗೆ ಸುರಿದು ಘನೋದಕದಿಂದ ಬ್ರಹ್ಮದೇವರು ಆ ಶ್ರೀಹರಿಯ ಪಾದವನ್ನು ಅಭಿಷೇಕಿಸಿ ಪೂಜಿಸಿದರು. ಅದೇ ಗಂಗಾ ನದಿ ಎಂದು ಪ್ರಸಿದ್ಧವಾದ ಪರಮಮಂಗಲಕರವಾದ ನದಿ. ಮುಂದೆ ಅದು ಭಗೀರಥನಿಂದ ಭೂಮಿಗೆ ಬಂದು ಭಾಗೀರಥಿ ಎನ್ನಿಸಿತು. ಮುಂದೆ ಪಾತಾಳಕ್ಕೆ ಹರಿದು ಪಾತಾಳಗಂಗೆ ಎನ್ನಿಸಿತು. ಮೂರು ಲೋಕದಲ್ಲೂ ಹರಿಯುವ ನದಿ ಎಂಬ ಕಾರಣಕ್ಕೆ ಇದಕ್ಕೆ ತ್ರಿಪಥಗಾ ಎಂದು ಹೆಸರು. ಗಂ, ಗಾ ಎಂಬುದಕ್ಕೆ ಪಾಪವನ್ನು ಪರಿಹರಿಸುವಳು ಎಂದರ್ಥ. ಇದರ ತೀರದಲ್ಲಿ ವಾಸ, ಇದರ ದರ್ಶನ, ಸ್ಪರ್ಶನ, ಸ್ನಾನ, ನಾಮೋಚ್ಚಾರಣೆ ಮೊದಲಾಗಿ ಸಕಲವೂ ಸಹ ಪಾಪಹರ ಹಾಗೂ ಪುಣ್ಯಕರ ಎಂದು ಶಾಸ್ತ್ರಗಳು ಸಾರಿವೆ. ಯಾವುದೇ ನದಿಯಲ್ಲಿ ಮೀಯುವಾಗಲು ಹಾಗೂ ಪ್ರತಿನಿತ್ಯ ಸ್ನಾನ ಕಾಲಕ್ಕೂ ಗಂಗೆಯ ನಾಮಸ್ಮರಣೆ ವಿಹಿತ. ನಾಮೋಚ್ಚಾರಣೆಯಿಂದಲೇ ನೂರಾರು

---

೧. ಆದೌ ಧವಲಗಂಗಾಖ್ಯಾ ಗಂಗಾದ್ವಾರಾಭಿಧಾಽನ್ತರೇ।
ಪಶ್ಚಾತ್ ಕುಶಾವರ್ತಪದಾ ಗೋದಾ ಮೋದಾಯ ಸಾ ಸದಾ॥ – ತೀರ್ಥಪ್ರಬಂಧ (ಉ.ಪ್ರ/೧೧)

ಯೋಜನಗಳ ದೂರದಿಂದಲೇ ಸಕಲಪಾಪಗಳನ್ನು ಪರಿಹರಿಸಿ ಮುಕ್ತಿಗೆ ದಾರಿ ತೋರುವ ಅಪೂರ್ವತೆ ಇದರದು[೧].

೪. '**ಸಿಂಧು**' ನದಿಯು ಭರತಖಂಡದ ಮಹಾನದಿಗಳಲ್ಲಿ ಒಂದು. ಪ್ರತಿನಿತ್ಯ ಸ್ಮರಣೆಗೆ ವಿಹಿತವಾದ ಏಳು ಮಹಾನದಿಗಳಲ್ಲಿ ಇದೂ ಸೇರಿದೆ. ಹಿಮಾಲಯದಲ್ಲಿ ಉಗಮ ಹೊಂದುವ ಇದರ ಬಹುಭಾಗ ಇಂದಿನ ಪಾಕಿಸ್ತಾನದಲ್ಲಿ ಹರಿಯುವುದು. ಇದು ನಾರಾಯಣ ಸರೋವರ ಎಂಬಲ್ಲಿ ಇಂದಿನ ಪೂರ್ವ(ಅರಬ್ಬೀ)ಸಮುದ್ರವನ್ನು ಸೇರುವುದು. ಆ ನಾರಾಯಣ ಸರೋವರದಲ್ಲಿಯೇ ಪ್ರಚೇತಸರು ಮೊದಲಾದ ಮಹನೀಯರು ಸಾವಿರಾರು ವರ್ಷಗಳ ಕಾಲ ತಪಸ್ಸನ್ನಾಚರಿಸಿ ಸದ್ಗತಿಯನ್ನು ಪಡೆದುಕೊಂಡರು; ಪೂರ್ವಕ್ಕೆ ಹರಿಯುವ ನದಿಯಾದ್ದರಿಂದ ಇದಕ್ಕೆ 'ನದ' ಎಂದು ಹೆಸರು.

೫. '**ಸರಸ್ವತಿ**'ಯು ಭರತಖಂಡದ ಸಪ್ತಮಹಾನದಿಗಳಲ್ಲಿ ಒಂದು. ಅನೇಕ ಕಡೆ ಸರಸ್ವತಿ ಎಂಬ ಹೆಸರಿನ ನದಿಗಳು ಕಂಡುಬರುವವು. ಬದರಿಯಲ್ಲಿ ಅಲಕನಂದೆಯೊಂದಿಗೆ ಕೇಶವಪ್ರಯಾಗದಲ್ಲಿ ಸೇರುವ ಸರಸ್ವತೀ ನದಿ ಒಂದು. ಕುರುಕ್ಷೇತ್ರದಲ್ಲಿ ಹರಿಯುತ್ತಿದ್ದ ಸರಸ್ವತೀ ಇನ್ನೊಂದು. ಮಾತೃಗಯೆಯಲ್ಲಿ ಹರಿದು ಪ್ರಭಾಸಕ್ಷೇತ್ರದಲ್ಲಿ ಹಿರಣ್ಯಾ, ಕಪಿಲಗಳೊಂದಿಗೆ ಸೇರಿ ಸಮುದ್ರ ಸೇರುವ ಸರಸ್ವತಿ ಮತ್ತೊಂದು. ಗಯಾಕ್ಷೇತ್ರದ ಬಳಿ ಧರ್ಮಾರಣ್ಯ ಎಂಬಲ್ಲಿ ಕಂಡುಬರುವ ಸರಸ್ವತಿ ಇನ್ನೊಂದು. ತ್ರಿವೇಣಿ ಸಂಗಮದಲ್ಲಿ ಗುಪ್ತಗಾಮಿನೀ ಎನ್ನಿಸಿದ ಸರಸ್ವತಿ ಬೇರೊಂದು. ಇಷ್ಟು ಸರಸ್ವತಿಗಳಲ್ಲಿ ಪ್ರಧಾನವೆನ್ನಿಸಿರುವುದು ತ್ರಿವೇಣಿಸಂಗಮದ ಗುಪ್ತಗಾಮಿನಿ ಸರಸ್ವತಿಯೇ. ಕುರುಕ್ಷೇತ್ರದಲ್ಲಿ ಇಂದು ಸರಸ್ವತಿ ನದಿಯು ಹರಿಯುತ್ತಿತ್ತು ಎನ್ನಲಾಗುವ ಸಾರಸ್ ಎಂಬ ಒಂದು ಸ್ಥಳವಿದೆ. ಕುರುಕ್ಷೇತ್ರ ಯುದ್ಧದಲ್ಲಿ ಮಡಿದ ಸಕಲ ಸೈನಿಕರ ದೇಹಗಳನ್ನು ಕೆಲವು ಪ್ರಧಾನ ರಾಜರ ದೇಹಗಳನ್ನು ಇದರಲ್ಲಿಯೇ ವಿಸರ್ಜಿಸಿದರು ಎಂಬುದಾಗಿ ಮಹಾಭಾರತ ಹಾಗೂ ಮಹಾಭಾರತತಾತ್ಪರ್ಯನಿರ್ಣಯಗಳಲ್ಲಿ ಉಲ್ಲೇಖವಿದೆ. ಸರಸ್ವತೀ ನದಿಯು ಕುರುಕ್ಷೇತ್ರದಲ್ಲಿ ಹರಿಯುತ್ತಿದ್ದುದಕ್ಕೆ ಅನೇಕ ಪುರಾವೆಗಳು ಇತ್ತೀಚಿನ ದಿನಗಳಲ್ಲಿ ಲಭಿಸಿವೆ.

೬. '**ಯಮುನೆ**'ಯು ಸಹ ಸಪ್ತಮಹಾನದಿಗಳಲ್ಲಿ ಒಂದು ಎಂದು ಪರಿಗಣಿತ-ವಾಗಿದೆ[೨]. ಹಿಮಾಲಯದ ಯಮುನೋತ್ರಿ ಎಂಬಲ್ಲಿ ಇದರ ಉಗಮ. ಮುಂದೆ ಇದು

---

೧. ಗಂಗಾನದಿಯನ್ನು ಕುರಿತು ತೀರ್ಥಪ್ರಬಂಧದಲ್ಲಿ ಶ್ರೀವಾದಿರಾಜಸ್ವಾಮಿಗಳು ಅಪೂರ್ವ ವಿವರಗಳನ್ನು ನೀಡಿರುವರು: ಶ್ರೀಶೇಷಚಂದ್ರಿಕಾಚಾರ್ಯರ 'ಗಂಗಾಸ್ತುತಿ', ಶ್ರೀಸತ್ಯಧರ್ಮತೀರ್ಥರ 'ಗಂಗಾಲಹರೀ' ಮೊದಲಾದ ಕೃತಿಗಳಲ್ಲೂ ಅನೇಕ ಅಪೂರ್ವ ವಿವರಗಳು ತುಂಬಿವೆ: ಅವುಗಳನ್ನೆಲ್ಲ ನಮ್ಮ ಪ್ರಕಾಶನದ 'ಸ್ತೋತ್ರಮಾಲಿಕಾ ಭಾಗ-೧೦'ರಲ್ಲಿ ಕೊಡಲಾಗಿದೆ.

೨. ಕಾಲಿಂದಿ ತ್ವಮಘಾನ್ವಿತಾನಪಿ ಸತಃ ಕೃತ್ವಾ ಪವಿತ್ರಾತ್ಮನೋ
ಗಂತುಂ ನೈವ ಕದಾऽಪಿ ಮುಂಚಸಿ ತವ ಭ್ರಾತುರ್ನಿಕೇತಂ ಪ್ರತಿ।

ಪ್ರಯಾಗದಲ್ಲಿ ಗಂಗೆಯೊಂದಿಗೆ ಸಂಗಮವನ್ನು ಹೊಂದುವುದು. ಮಥುರೆಯಲ್ಲಿ ಹರಿಯುವ ಈ ನದಿ ಶ್ರೀಕೃಷ್ಣನ ವಿಹಾರಕ್ಕೆ ಪ್ರಧಾನ ನೆಲೆಯಾಗಿತ್ತು ಎಂಬುದು ಶ್ರೀಮದ್ಭಾಗವತಾದಿ ಪುರಾಣಗಳಿಂದ ತಿಳಿದುಬರುತ್ತದೆ. ಗಂಗೆ ಶ್ರೀಕೃಷ್ಣನ ಪಾದೋದ್ಭವೆ ಎಂದು ಪ್ರಸಿದ್ಧವಾಗಿದ್ದರೆ, ಯಮುನೆಯು ಅವನ ಅಪೂರ್ವ ವಿಹಾರದ ಜಲ ಎಂಬುದಾಗಿ ಪ್ರಸಿದ್ಧವಾಗಿದೆ. ಇದರ ದ್ವೀಪದಲ್ಲಿಯೇ ಶ್ರೀಹರಿಯ ವೇದವ್ಯಾಸರೂಪ ಪ್ರಾದುರ್ಭಾವಗೊಂಡಿದ್ದು, ಹೀಗೆ ಶ್ರೀಹರಿಯ ಎರಡು ರೂಪಗಳ ವಿಶೇಷ ಸಂಬಂಧ ಹೊಂದಿರುವುದು ಈ ನದಿಯ ಹಿರಿಮೆ. ಶ್ರೀವೇದವ್ಯಾಸರು ಅವತರಿಸಿದ ದ್ವೀಪವು ಕೃಷ್ಣದ್ವೀಪ ಎನ್ನಿಸಿದ್ದು ಅದರಲ್ಲಿ ಅವತರಿಸಿದ ವೇದವ್ಯಾಸರಿಗೆ ಕೃಷ್ಣದ್ವೈಪಾಯನ ಎಂದು ಹೆಸರಿದೆ. ತನ್ನ ಬಣ್ಣದಿಂದಾಗಿ ಕೃಷ್ಣಾ ಎಂಬ ಹೆಸರಿನಿಂದಲೂ ಇದು ಪ್ರಸಿದ್ಧವಾಗಿದೆ. ಕಾಲೀಯ ಎಂಬ ಮಹಾಸರ್ಪ ವೃಂದಾವನದ ಬಳಿ ಇದರಲ್ಲಿ ಸೇರಿಕೊಂಡಿದ್ದಿತು. ಶ್ರೀಕೃಷ್ಣ ಅದನ್ನು ಮರ್ದನ ಮಾಡಿ ಅಲ್ಲಿಂದ ಸಮುದ್ರಕ್ಕೆ ಕಳುಹಿಸಿದ. ಬಲರಾಮ ಒಮ್ಮೆ ತನ್ನ ವಿಹಾರಕ್ಕೆಂದು ಇದನ್ನು ತನ್ನ ಬಳಿ ಬರಲು ಆಹ್ವಾನಿಸಿದಾಗ ಇದು ಅವನ ಆಜ್ಞೆಯನ್ನು ಪಾಲಿಸಲಿಲ್ಲ. ಕೆರಳಿದ ಬಲರಾಮ ತನ್ನ ನೇಗಿಲಿನಿಂದ ಇದರ ಪಾತ್ರವನ್ನೇ ಬದಲಿಸಿ ತನ್ನ ಬಳಿಗೆ ಸೆಳೆದುಕೊಂಡ ಎಂಬ ವಿವರವೂ ಶ್ರೀಮದ್ಭಾವತಾದಿಗಳಲ್ಲಿ ಸುಪ್ರಸಿದ್ಧವಾಗಿದೆ.

೭. '**ಗೋದಾವರಿ**'ಯು ದಕ್ಷಿಣ ಭಾರತದ ಅತ್ಯಂತ ಪ್ರಮುಖವಾದ ನದಿ[೧]. ಇದು ಭರತಖಂಡದ ಸಪ್ತಮಹಾನದಿಗಳಲ್ಲಿ ಒಂದು[೨]. ಗಂಗೆಯ ಮತ್ತೊಂದು ಕವಲು ಎನ್ನಿಸಿರುವ ಇದು ವೃದ್ಧ ಗಂಗೆ ಎಂದೂ ಪ್ರಸಿದ್ಧ. ನದೀ ತಾರತಮ್ಯದಲ್ಲಿ ಗಂಗೆಯ ಅನಂತರದ ಸ್ಥಾನ ಗೋದಾವರಿಯದೇ ಆಗಿದೆ. ಭಗೀರಥನಿಂದ ಭುವಿಗಿಳಿದು ಭಾಗೀರಥಿ ಎನ್ನಿಸಿದ ಗಂಗೆ, ಗೌತಮ ಮುನಿಗಳ ನಿಮಿತ್ತದಿಂದ ಧರೆಗಿಳಿದು ಗೌತಮೀ ಎನ್ನಿಸಿದಳು. ಇದಕ್ಕೆ ಕಾರಣವಾದ ಒಂದು ಗೋವಿನ ಕಥೆ ವರಾಹಾದಿ ಪುರಾಣಗಳಲ್ಲಿ ಬಂದಿದೆ.

---

ಕಿಂತು ಕ್ಷೀರಪಯೋಧಿವಾಸನಿರತಾನ್ ಪ್ರೀತ್ಯಾ ಕರೋಷ್ಯಾಶ್ರಿತಾನ್
ಸ್ನಿಗ್ಧೇ ಭರ್ತರಿ ಕಾಮಿನೀಜನರುಚಃ ತತ್ಪಕ್ಷ ಏವ ಹ್ಯಲಮ್ ॥ – ತೀರ್ಥಪ್ರಬಂಧ (ಉ.ಪ್ರ/೧೨)

೧. ವಿಪ್ರರ್ಷಿದೇವಕುಲಸಂಕುಲತೀರಯುಗ್ಮಾ ವಿದ್ರಾವಿತಾಘತೃಣರೇಣುಕಣಾ ಸ್ವವಾತೈಃ।
ಸ್ವಾದೂದಕೈಃ ಪ್ರಶಮಿತಾಖಿಲಲೋಕಶೋಕಾ ಗೋದಾವರೀ ಶುಭಕರೀ ಸರಿದುದ್ಧರೇನ್ನಃ॥
ಅಂಹಾಂಸಿ ಹಂಸಿ ಸತತಂ ಕಿಲ ರಾಸಿ ಪುಣ್ಯಂ ಸಿಂಹಸ್ಥಿತೇ ಸುರಗುರೌ ನ ತದಂಬ ಯಾಚೇ।
ಗೋದೇ ಸಮಸ್ತಫಲದೇ ದಿಶ ಕೃಷ್ಣಪಾದೇ ಭಕ್ತಿಂ ವಿರಕ್ತಿಮಿತರತ್ರ ಪರತ್ರ ಮುಕ್ತಿಮ್ ॥
– ತೀರ್ಥಪ್ರಬಂಧ (ಉ.ಪ್ರ/೯,೧೦)

೨. ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತೀ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು॥ – ಪುರಾಣವಾಕ್ಯ

ಸಿಂಹರಾಶಿಯಲ್ಲಿ ಗುರುವಿದ್ದಾಗ[೧] ಗೋದಾವರಿಯ ಸ್ನಾನ ಅರವತ್ತು ಸಾವಿರ ವರ್ಷಗಳಷ್ಟು ದೀರ್ಘಕಾಲ ಗಂಗಾಸ್ನಾನ ಮಾಡಿದ ಫಲಕ್ಕೆ ಸಮ ಎಂದು ಪುರಾಣಗಳು ಸಾರಿವೆ.

೮. '[೨]**ನರ್ಮದೆ**'ಯು ಸಹ ಸಪ್ತಮಹಾನದಿಗಳಲ್ಲಿ ಒಂದಾದ ಶ್ರೇಷ್ಠನದಿ. ವಿಂಧ್ಯಪರ್ವತದ ಮೇಖಲಾ ಎಂಬಲ್ಲಿ ಉಗಮಸ್ಥಾನವನ್ನು ಹೊಂದಿರುವುದರಿಂದ ಇದಕ್ಕೆ ಮೇಖಲಕನ್ಯಕಾ ಎಂದು ಹೆಸರು. ಇದು ಭರೂಚ್ ಎಂಬಲ್ಲಿ ಅರಬ್ಬಿ ಸಮುದ್ರವನ್ನು ಸೇರುವುದು. ಬಲಿಚಕ್ರವರ್ತಿ ಯಾಗ ಮಾಡಿದ ಭೃಗುಕಚ್ಛ ಎಂಬ ಸ್ಥಳವೇ ಈ ಭರೂಚ್ ನಗರ. ಅಮೃತಶಿಲೆಗಳು ಸಿಕ್ಕುವ ಅಪೂರ್ವ ನದಿ ಎಂಬುದು ಇದರ ಹಿರಿಮೆ. ಇದರ ಅಘಮರ್ಷಣತೀರ್ಥ ಎಂಬ ಸ್ಥಳದಲ್ಲಿ ದಕ್ಷಪ್ರಜಾಪತಿ ಶ್ರೀಹರಿಯನ್ನು ಕುರಿತು ಹಂಸಗುಹ್ಯಸ್ತೋತ್ರವನ್ನು ಪಠಿಸುತ್ತಾ ತಪಸ್ಸು ಮಾಡಿ ಸಿದ್ಧಿ ಪಡೆದ ವಿವರ ಶ್ರೀಮದ್ಭಾಗವತದಲ್ಲಿದೆ. ಕೆಲವು ನದಿಗಳು ಸ್ನಾನದಿಂದ ಪುಣ್ಯಕರ, ಕೆಲವು ದರ್ಶನದಿಂದ ಪುಣ್ಯಕರ. ನರ್ಮದೆಯ ನಾಮೋಚ್ಚಾರಣೆಯೇ ತುಂಬಾ ಪುಣ್ಯಕರ ಎಂಬುದು ಪೌರಾಣಿಕ ಪ್ರಸಿದ್ಧಿ. ಇದರ ತೀರದ ಮಾಹಿಷ್ಮತೀ ಎಂಬ ನಗರವು ಕಾರ್ತವೀರ್ಯಾರ್ಜುನನ ರಾಜಧಾನಿಯಾಗಿದ್ದಿತು. ಕಾರ್ತವೀರ್ಯಾರ್ಜುನನು ರಾವಣನನ್ನು ಪರಾಭವಗೊಳಿಸಿದ್ದು ಇದೇ ಸ್ಥಳದಲ್ಲಿಯೇ ಎಂದು ರಾಮಾಯಣದಲ್ಲಿ ಬಂದಿದೆ.

೯. '[೩]**ಕೃಷ್ಣಾ**' ಎಂದರೆ, ಕೃಷ್ಣವೇಣೀ ಎಂದರ್ಥ. ನದೀತಾರತಮ್ಯದಲ್ಲಿ ಗೋದಾವರಿಯ ಅನಂತರದ ಸ್ಥಾನ ಇದರದ್ದು. ಕೃಷ್ಣಾ ಎಂಬುದು ವೇಣಿ ಎಂಬ ಮತ್ತೊಂದು ನದಿಯೊಂದಿಗೆ ಸೇರಿದ ಮೇಲೆ ಕೃಷ್ಣವೇಣಿ ಎನ್ನಿಸುವುದು. ಭದ್ರೆಯನ್ನು ಸೇರಿದ ತುಂಗೆ ತುಂಗಭದ್ರಾ ಹೇಗೋ ಹಾಗೆ. ತುಂಗಭದ್ರಾ ಮೊದಲಾದ ಅನೇಕ ನದಿಗಳು ಇದರಲ್ಲಿ ಸೇರುವವು. ನಿವೃತ್ತಿ ಸಂಗಮ ಎಂಬ ಕ್ಷೇತ್ರದಲ್ಲಿ ಒಟ್ಟು ಸಪ್ತನದಿಗಳ ಸಂಗಮ ಎಂಬುದು

---

೧. 'ಗೋದತ್ತಂ ವಾರಿ ಗೋದಾವರೀ' ಎಂಬುದಾಗಿ ಇದರ ಅರ್ಥವನ್ನು ಶ್ರೀತ್ರಿವಿಕ್ರಮಪಂಡಿತಾಚಾರ್ಯರು ತತ್ತ್ವಪ್ರದೀಪ ಕೃತಿಯಲ್ಲಿ ತಿಳಿಸಿರುವರು.

೨. ಸ್ನಾವಗಾಹನಮಾತ್ರೇಣ ಯಾ ಸ್ವರ್ಗವನಿತಾಜನ್ಯೈಃ।
ಸಹ ನರ್ಮಗಿರಾಂ ದಾತ್ರೀ ಭಜೇ ತಾಂ ನರ್ಮದಾನದೀಮ್ ॥ – ತೀರ್ಥಪ್ರಬಂಧ (ಪ.ಪ್ರ/೮೭)

೩. ನಮಾಮಿ ಸುಕೃತಶ್ರೇಣೀಂ ಕೃಷ್ಣವೇಣೀಂ ತರಂಗಿಣೀಮ್।
ಯದ್ವೀಕ್ಷಣಂ ಕೋಟಿಜನ್ಮಕೃತದುಷ್ಕರ್ಮಶಿಕ್ಷಣಮ್ ॥
ಗುರುಂ ಕನ್ಯಾಗತಂ ಧನ್ಯಾ ಯಾ ಪುರಸ್ಕೃತ್ಯ ಸೇವ್ಯಸೇ।
ಶ್ರೀಕೃಷ್ಣವೇಣಿ ಪಾಪಾನಿ ಸಾ ತ್ವಂ ಪುಣ್ಯಯಸಿ ಧ್ರುವಮ್ ॥
ಕಿಂ ವರ್ಣಯಾಮಿ ಹೇ ಕೃಷ್ಣೇ ತ್ವಯಿ ಕೃಷ್ಣಸ್ಯ ಸನ್ನಿಧಿಮ್।
ಯತ್ ಸಮಸ್ತಪದೋಕ್ತೌ ತು ಪುಂಭಾವಮವಲಂಬಸೇ ॥
ಶ್ರೀಕೃಷ್ಣವೇಣಿ ಕಲ್ಯಾಣಿ ಯಾಚೇ ತ್ವಾಮಹಮನ್ವಹಮ್।
ಶ್ರೀಕೃಷ್ಣಚರಣಾಂಭೋಜೇ ಭಕ್ತಿಂ ಭಕ್ತಭವಚ್ಛಿದಿ ॥ – ತೀರ್ಥಪ್ರಬಂಧ (ಉ.ಪ್ರ/೧-೪)

ಪ್ರಸಿದ್ಧಿ. ಕನ್ಯಾರಾಶಿಯಲ್ಲಿ ಗುರುವಿದ್ದಾಗ ಕೃಷ್ಣೆಗೆ ಗಂಗೆಯ ಆಗಮನ. ಆಗ ಇದರಲ್ಲಿ ಮಾಡುವ ಸ್ನಾನಾದಿಗಳು ಗಂಗಾಸ್ನಾನ ಮೊದಲಾದವುಗಳಿಗಿಂತ ಸಾವಿರಾರು ಪಟ್ಟು ಅಧಿಕ ಎಂಬುದು ಪ್ರತೀತಿ.

೧೦. '**ಭೀಮಾ**' ಎಂದೇ ಪ್ರಸಿದ್ಧವಾಗಿರುವ ಇದು ಕೃಷ್ಣಾನದಿಯ ಪ್ರಧಾನ ಉಪನದಿ. ಸುಪ್ರಸಿದ್ಧವಾದ ಪಂಢರಪುರ ಕ್ಷೇತ್ರವು ಈ ನದಿಯ ತಟದಲ್ಲಿದೆ. ಪಂಢರಪುರಕ್ಷೇತ್ರವನ್ನು ಅರ್ಧಚಂದ್ರಾಕಾರವಾಗಿ ಬಳಸುವುದರಿಂದ ಅಲ್ಲಿ ಇದಕ್ಕೆ ಚಂದ್ರಭಾಗಾ ಎಂದೇ ಹೆಸರು. ಹಂಪೆಯ ಯಂತ್ರೋದ್ಧಾರಕನ ಬಳಿ ಇರುವ ತುಂಗಭದ್ರೆಗೆ ಚಕ್ರತೀರ್ಥ ಎಂಬುದು ಹೇಗೋ ಹಾಗೆ. ಹೆಚ್ಚಿನ ನದಿಗಳು ಉತ್ತರವಾಹಿನಿ, ಪೂರ್ವವಾಹಿನಿಗಳಾಗಿದ್ದಾಗ ಶ್ರೇಷ್ಠವೆನ್ನಿಸಿದರೆ, ಭೀಮರಥಿಯು ದಕ್ಷಿಣವಾಹಿನಿಯಾಗಿದ್ದಾಗ ಶ್ರೇಷ್ಠ ಎಂದು ಪುರಾಣಗಳು ಸಾರುವವು. ಮಳಖೇಡದ ಬಳಿ ಹರಿಯುವ ಕಾಗಿನೀ ಈ ಭೀಮಾನದಿಯ ಉಪನದಿ.

೧೧. '**ಫಲ್ಗು**' ವಿಷ್ಣುಪಾದದಿಂದಾಗಿ ಲೋಕವಿಖ್ಯಾತವಾಗಿರುವ ಗಯಾಕ್ಷೇತ್ರವು ಈ ನದೀತೀರದಲ್ಲಿದೆ[೧]. ಆ ಕ್ಷೇತ್ರದ ಬಳಿಯ ಕೋಲಾಹಲ ಎಂಬ ಪರ್ವತದಲ್ಲಿ ಇದರ ಉಗಮ. ಸರಸ್ವತೀ ಹಾಗೂ ಧರ್ಮಾ ಎಂಬ ಎರಡು ನದಿಗಳೂ ಸಹ ಗಯೆಯಲ್ಲಿ ಇದನ್ನು ಸೇರುವುದರಿಂದ ಇದು ತ್ರಿವೇಣಿ ಎಂಬುದಾಗಿಯೇ ಅಲ್ಲಿ ಪ್ರಸಿದ್ಧ. ಸಾಮಾನ್ಯವಾಗಿ ಇದು ಗುಪ್ತಗಾಮಿನಿಯಾದ ನದಿ. ವಿಶೇಷವಾದ ಮಳೆಯಾದಾಗ ಮಾತ್ರವೇ ಇದರಲ್ಲಿ ಪ್ರವಾಹ ಕಾಣಿಸಿಕೊಳ್ಳುವುದು. ಅದು ನಡೆಯುವುದು ಅನೇಕ ದಶಕಗಳಿಗೆ ಒಮ್ಮೆ ಎಂದು ಹೇಳುವುದು. ಇದು ಗಾತ್ರದಲ್ಲಿ ಫಲ್ಗುವಾದರೂ, ಪಾಪ ಕಳೆಯುವಲ್ಲಿ ಮಾತ್ರ ಎಲ್ಲ ಪಾಪಗಳನ್ನು ಫಲ್ಗು ಎಂದೇ ಭಾವಿಸುವುದು ಇದರ ಹಿರಿಮೆ ಎಂದು ಶ್ರೀವಾದಿರಾಜರು ವರ್ಣಿಸಿರುವರು.

೧೨. '**ಸರಯೂ**' : ಗಂಗೆಯ ಪ್ರಧಾನ ಉಪನದಿಗಳಲ್ಲಿ ಸರಯೂ ನದಿಯೂ ಒಂದು. ಶ್ರೀರಾಮನಿಂದಾಗಿ ಸಪ್ತಮಹಾಕ್ಷೇತ್ರಗಳಲ್ಲಿ ಒಂದೆನಿಸಿದ ಅಯೋಧ್ಯೆ ಈ ನದಿಯ ತೀರದಲ್ಲಿದೆ. ಇದು ಮುಂದೆ ಪಾಟ್ನಾದ ಬಳಿ ಗಂಗೆಯನ್ನು ಸೇರುವುದು. ರಾಮಾಯಣದಲ್ಲಿ ಅನೇಕ ಬಾರಿ ಇದರ ಪ್ರಸ್ತಾಪ ಬರುವುದು. ಇದನ್ನು ದಾಟಿಯೇ ಶ್ರೀರಾಮ ಲಕ್ಷ್ಮಣ ಸಮೇತನಾಗಿ ವಿಶ್ವಾಮಿತ್ರರೊಂದಿಗೆ ಸಿದ್ಧಾಶ್ರಮಕ್ಕೆ ತೆರಳಿ ದಾರಿಯಲ್ಲಿ ತಾಟಕಿ ಮೊದಲಾದವರನ್ನು ಕೊಂದದ್ದು ಎಂದು ರಾಮಾಯಣದಲ್ಲಿ ಉಲ್ಲೇಖವಿದೆ. ವಿಶ್ವಾಮಿತ್ರರು 'ಕೌಸಲ್ಯಾ ಸುಪ್ರಜಾರಾಮ' ಎಂದು ಹೇಳಿದ್ದು ಈ ನದೀ ತೀರದಲ್ಲಿಯೇ.

---

೧. ಅಪಿ ಜನ್ಮಶತೋದ್ಭೂತಂ ಕೃಪಯಾ ಯಾ ಹರತ್ಯಘಮ್ ।
ಮನುತೇ ಫಲ್ಗು ಸಾ ಫಲ್ಗುನದೀ ಸದ್ಗುಣದಾऽಸ್ತು ಮೇ ॥ – ತೀರ್ಥಪ್ರಬಂಧ (ಉ.ಪ್ರ/೩೦)

೧೩. '**ಶ್ರೀಗಂಡಕೀ**' ನದಿಯು ಗಂಗಾನದಿಯ ಉಪನದಿಗಳಲ್ಲಿ ಒಂದು. ನೇಪಾಳದ ಪುಲಹಾಶ್ರಮದಲ್ಲಿ ಹರಿಯುವ ಚಕ್ರಾನದಿಯೊಂದಿಗೆ ಇದು ಸೇರಿ ಮುಂದೆ ಕಾಳೀಗಂಡಕೀ ಎನ್ನಿಸುವುದು. ಪ್ರತಿನಿತ್ಯದ ದೇವಪೂಜೆಗೆ ಕಡ್ಡಾಯವೆನ್ನಿಸಿರುವ ಸಾಲಿಗ್ರಾಮಗಳು ದೊರೆಯುವ ಏಕೈಕ ನದಿ ಎಂದರೆ ಈ ಗಂಡಕೀ. ಮುಕ್ತಿನಾಥ ಎಂಬಲ್ಲಿನ ದಾಮೋದರ ಕುಂಡ ಎಂಬುದು ಸಾಲಿಗ್ರಾಮಗಳ ಮೂಲಸ್ಥಳ. ಪುಲಹಾಶ್ರಮ ಎಂಬ ಸ್ಥಳದಲ್ಲಿಯೇ ಜಡಭರತ ನೆಲೆಸಿದ್ದ ಎಂಬ ವಿವರ ಶ್ರೀಮದ್ಭಾಗವತಪುರಾಣದಲ್ಲಿದೆ. ಅನೇಕ ಉಪನದಿಗಳೊಂದಿಗೆ ಕೂಡಿಕೊಂಡು ಇದು ಪಾಟ್ನಾನಗರದ ಹೊರವಲಯದಲ್ಲಿ ಗಂಗೆಯೊಂದಿಗೆ ಸಂಗಮವನ್ನು ಹೊಂದುವುದು. ಸಾಲಿಗ್ರಾಮಗಳ ತವರು ಎಂಬ ವಿಶೇಷಾಂಶವನ್ನು ಸೂಚಿಸಲು ಗಂಡಕೀ ನದಿಗೆ ಶ್ರೀಕಾರವನ್ನು ಹಾಕಿರುವರು ಎಂದು ತಿಳಿಯಬೇಕು. ಈ ಶ್ರೀಕಾರವನ್ನು ಇತರ ನದಿಗಳಿಗೂ ಸಹ ಯಥೋಚಿತವಾಗಿ ಅನ್ವಯಿಸಿಕೊಳ್ಳಬೇಕು.

೧೪. '**ಗೋಮತಿ**'ಯು ಗಂಗೆಯ ಮತ್ತೊಂದು ಉಪನದಿ. ನೈಮಿಷಾರಣ್ಯದಲ್ಲಿ ಪ್ರಧಾನವಾಗಿ ಹರಿಯುವ ಇದು, ಮುಂದೆ ಲಖನೌ ಮೊದಲಾದವುಗಳ ಮೂಲಕ ಸಾಗಿ ಪಾಟ್ನಾದಿಂದ ಕೆಲವು ಕಿ.ಮೀ.ಗಳ ಮುಂಚೆಯೇ ಗಂಗಾನದಿಯನ್ನು ಸೇರುವುದು. ಗೋಮತಿ[೧] ಎಂಬ ಮತ್ತೊಂದು ನದಿ ದ್ವಾರಕಾಕ್ಷೇತ್ರದಲ್ಲಿದೆ. ಇದು ನೇರವಾಗಿ ಸಮುದ್ರವನ್ನು ಸೇರುವ ಮಹಾನದಿ. ದ್ವಾರಕೆಯ ಬಳಿಯಲ್ಲಿ ಸಮುದ್ರವನ್ನು ಸೇರುವ ಈ ನದಿಯ ಸಂಗಮಸ್ಥಳವಾದ ಚಕ್ರತೀರ್ಥ ಎಂಬಲ್ಲಿ ಚಕ್ರಾಂಕಿತಗಳು ಅಪಾರಸಂಖ್ಯೆಯಲ್ಲಿ ದೊರೆಯುವವು. ಶಿಲೆಯನ್ನು ತನ್ನ ಸ್ಪರ್ಶದಿಂದಾಗಿ ಚಕ್ರಾಂಕಿತವೆನ್ನಿಸುವ ಹಿರಿಮ ಆ ಸ್ಥಳದ್ದು. ಗೋಮತೀ ನದಿಯು ಮಹಾನದಿಯಾಗಿದ್ದರೂ, ಅದರ ಉಗಮ ಸಮುದ್ರದ ಬಳಿಯೇ ಗೋಮತೀಮಂದಿರ (ಗೋಮತಿಘಾಟ್) ಎಂಬಲ್ಲಿ ಕೇವಲ ಕೆಲವು ಮೀಟರುಗಳಷ್ಟು ಮಾತ್ರ ಹರಿದು ಇದು ಸಮುದ್ರವನ್ನು ಸೇರುವುದು. ಭಾಗಿರಥಿ, ಗೋದಾವರಿಯಂತೆ ಇದೂ ಸಹ ಗಂಗೆಯ ಒಂದು ಕವಲು ಎಂದು ಸ್ಕಂದಪುರಾಣದ ದ್ವಾರಕಾಮಾಹಾತ್ಮ್ಯದಲ್ಲಿದೆ. ಶ್ರೀಮದಾಚಾರ್ಯರು ಇದರ ತೀರದಲ್ಲಿ ಸಂಚರಿಸುವಾಗಲೇ ಪಾಖಂಡಿಯೊಬ್ಬ ವೇದಪ್ರಾಮಾಣ್ಯದ ಬಗ್ಗೆ ಎತ್ತಿದ ಸವಾಲೊಂದಕ್ಕೆ ಉತ್ತರ ನೀಡಿ ವೇದಪ್ರಾಮಾಣ್ಯವನ್ನು ಸ್ಥಾಪಿಸಿದರು ಎಂಬ ಉಲ್ಲೇಖ ಸುಮಧ್ವವಿಜಯದಲ್ಲಿದೆ[೨]. ಶ್ರೀವಾದಿರಾಜಸ್ವಾಮಿಗಳು ದ್ವಾರಕೆಗೆ ಸಂದರ್ಶನವಿತ್ತಿದ್ದಾಗ

---

೧. ಶ್ರೀಕೃಷ್ಣಚರಣಾಂಭೋಜರಜೋರಂಜಿತಗೋಮತೀಮ್ ।
ಗೋಮತೀಮಬ್ಧಿರಮಣೀಂ ಭಜೇ ತಾಪತ್ರಯಾಪಹಾಮ್ ॥ – ತೀರ್ಥಪ್ರಬಂಧ (ಪ.ಪ್ರ/೯೩)

೨. ಗೋಮತ್ಯಾಸ್ತಟನಿಕಟೇಽಚಕ್ರತೀರ್ಥಚಂದ್ರಂ ವಿಶ್ವಜ್ಞಂ ಕ್ಷಿತಿಪತಿರಂತ್ಯವರ್ಣಜನ್ಮಾ ।
ವಿದ್ವೇಷ್ಟಾ ಶ್ರುತಿಗುಣಸಾಧಕಂ ಶ್ರುತೀನಾಂ ವಾಚಾಲೋ ವಚನಮುವಾಚ ವಾಗ್ಮಿವರ್ಯಮ್ ॥
ಉನ್ಮತ್ತಪ್ರಲಪಿತವನ್ನ ತದ್ಧಿ ಮಾನಂ ಯದ್ವಾಕ್ಯಂ ವ್ಯಭಿಚರತಿ ಕ್ವಚಿತ್ ಫಲೇಽತ್ರ ।

ಅಲ್ಲಿದ್ದ ಕೃಷ್ಣಯತಿ ಎಂಬ ಕುರುಡು ಯತಿಗಳಿಗೆ ತಾವು ರಚಿಸಿದ ಮಧ್ವಾಷ್ಟಕದ ಪಠನೆಯ ಮೂಲಕ ದಿವ್ಯದೃಷ್ಟಿಯನ್ನು ಅನುಗ್ರಹಿಸಿದರು ಎಂದು ಅವರ ಚರಿತ್ರೆಯಲ್ಲಿದೆ. ಗೋಮತಿಸ್ನಾನ, ಸಮುದ್ರಸ್ನಾನ ಹಾಗೂ ಗೋಮತೀಸಮುದ್ರಸಂಗಮಸ್ನಾನ ಇವೆಲ್ಲವು ದ್ವಾರಕಾ ಯಾತ್ರೆಯಲ್ಲಿ ವಿಶೇಷವಾಗಿ ವಿಹಿತವಾಗಿವೆ.

೧೫. '**ಕಾವೇರೀ**': ಇದು ದಕ್ಷಿಣದ ಮಹಾನದಿಗಳಲ್ಲಿ ಒಂದು ಎಂಬುದು ಕಾವೇರಿಯ ಹಿರಿಮೆ[೧]. ಇದೂ ಸಹ ಭರತಖಂಡದ ಸಪ್ತಮಹಾನದಿಗಳಲ್ಲಿ ಒಂದು ಎಂದು ಪರಿಗಣಿತ-ವಾಗಿದೆ. ಕರ್ನಾಟಕದ ತಲಕಾವೇರಿ ಎಂಬಲ್ಲಿ ಉಗಮಹೊಂದುವ ಇದು ಮುಂದೆ ತಮಿಳುನಾಡಿನಲ್ಲಿ ಸಮುದ್ರವನ್ನು ಸೇರುವುದು. ಇದು ಹರಿಯುವ ಮೂರು ಸ್ಥಳಗಳಲ್ಲಿ ದ್ವೀಪಗಳುಂಟಾಗಿದ್ದು ಆ ಮೂರು ಸ್ಥಳಗಳಲ್ಲೂ ಶ್ರೀರಂಗನಾಥನ ಅಪೂರ್ವ ದೇವಸ್ಥಾನಗಳು, ವಿಗ್ರಹಗಳು ಇದ್ದು ಅವು ಕ್ರಮವಾಗಿ ಆದಿರಂಗ, ಮಧ್ಯರಂಗ ಹಾಗೂ ಅಂತ್ಯರಂಗ (ಶ್ರೀರಂಗ) ಎಂಬುದಾಗಿ ಪ್ರಸಿದ್ಧವಾಗಿವೆ. ಇವುಗಳಲ್ಲಿ ಶ್ರೀರಂಗ ಹೆಚ್ಚು ಪ್ರಧಾನವಾದದ್ದು. ಇತರ ನದಿಗಳು ಕೇವಲ ಮುಕ್ತಿಯನ್ನು ನೀಡುವ ನದಿಗಳೆಂದು ಪ್ರಸಿದ್ಧವಾಗಿದ್ದರೆ, ಕಾವೇರಿಯು ಮುಕ್ತಿಯೊಂದಿಗೆ ಭುಕ್ತಿಯನ್ನೂ ನೀಡುವ ಅಪೂರ್ವ ನದಿ[೨] ಎಂದು ಶ್ರೀವಾದಿರಾಜರು ತೀರ್ಥಪ್ರಬಂಧದಲ್ಲಿ ವರ್ಣಿಸಿರುವರು. ಕವೇರ ಎಂಬ ಮುನಿ-ಯಿಂದ ಇದು ಉದ್ಭವಿಸಿದ್ದರಿಂದ ಇದು ಕಾವೇರಿ, ಕವೇರಕನ್ಯಕಾ ಎಂದು ಹೆಸರು ಪಡೆದಿದೆ.

೧೬. '**ಕಪಿಲಾ**' ಎಂಬುದು ಕಾವೇರಿಯ ಒಂದು ಉಪನದಿ. ಇದು ಮೈಸೂರಿನ ಬಳಿಯ ತಿರುಮಕೂಡಲು ಎಂಬಲ್ಲಿ ಕಾವೇರಿಯನ್ನು ಸೇರುವುದು. ಪ್ರಸಿದ್ಧವಾದ ನಂಜನಗೂಡಿನ ಶ್ರೀಕಂಠೇಶ್ವರದೇವಸ್ಥಾನ ಇದರ ತೀರದಲ್ಲಿಯೇ ಇದೆ. ಕಪಿಲಾ ಎಂಬ ಮತ್ತೊಂದು ನದಿ ನಾಸಿಕ ಎಂಬಲ್ಲಿ ಕಂಡುಬರುವುದು. ಗೋದಾವರಿಯೊಂದಿಗೆ ಕೂಡಿಕೊಳ್ಳುವ ಕಪಿಲಾ ನದಿ ಅದು. ಆ ಸಂಗಮ ಸ್ಥಳದಲ್ಲಿಯೇ ಶ್ರೀರಾಮನ

---

ದೃಷ್ಟಾಂತೋ ಭವತಿ ತದಪ್ರಮಾಣತಾಯಾಂ ಸರ್ವೇಷಾಂ ಶ್ರುತಿವಚಸಾಂ ಚ ಸರ್ವಥೇತಿ ॥
ವೇದೋಕ್ತಂ ಫಲಮಲಮಾಪ್ಯತೇಽಧಿಕಾರಾದಿತ್ಯುಕ್ತೋಽತನುಮನಸಾಽಭ್ಯಧತ್ತ ಧೂರ್ತಃ ।
ಯೋಗ್ಯತ್ವೇ ಸತಿ ನ ಹಿ ದೃಶ್ಯತೇಽಧಿಕಾರೀ ನಾತಃ ಸ್ಯಾತ್ ಸ ಖರವಿಷಾಣವತ್ ಸದೇತಿ ॥
ಆಕ್ಷೇಪಂ ತಮಸಹಮಾನ ಉಚ್ಚಮಾನಃ ಸದ್ಯೋಽಸೌ ನಿಜಕರಪಲ್ಲವದ್ವಯೇನ ।
ಆದಾಯ ವ್ಯತನುತ ಬೀಜಮೋಷಧೀನಾಂ ಸೂಕ್ತೇನಾಂಕುರದಲಪುಷ್ಪಬೀಜಸೃಷ್ಟಿಮ್ ॥
- ಸುಮಧ್ವವಿಜಯ (೧೬/೨-೫)

೧. ಕಾವೇರಿ ಕಮನೀಯಾಂಗಂ ರಂಗನಾಥಂ ಸದಾ ಹೃದಿ ।
ಧತ್ಸೇ ತ್ವತ್ಸೇವಯಾ ದೇವಿ ಕೋ ನು ಕುರ್ಯಾನ್ನ ತಂ ಹೃದಿ ॥ ತೀರ್ಥಪ್ರಬಂಧ (ದ.ಪ್ರ/೧೦)
೨. ಮೋಕ್ಷದಾನಕ್ಷಮಾಃ ಸಂತಿ ಸರಿತಸ್ತತ್ರ ತತ್ರ ಹಿ ।
ಕಾವೇರೀ ಚೋಲಭೂಮಾತಾ ಭುಕ್ತಿಮುಕ್ತಿಕರೀ ಸರಿತ್ ॥ - ತೀರ್ಥಪ್ರಬಂಧ (ದ.ಪ್ರ/೧೧)

ಆದೇಶದಂತೆ ಲಕ್ಷ್ಮಣನು ಶೂರ್ಪನಖಿಯ ಕಿವಿ-ಮೂಗುಗಳನ್ನು ಕತ್ತರಿಸಿ ಹಾಕಿದ ಎಂದು ಪ್ರತೀತಿ. ಅದರ ಬಳಿಯಲ್ಲಿಯೇ ಲಕ್ಷ್ಮಣ ಮೂರ್ತಿಯ ಒಂದು ದೇವಾಲಯವಿದೆ. ಪ್ರಭಾಸದ ಬಳಿ ಹಿರಣ್ಯಾ ಹಾಗೂ ಸರಸ್ವತಿಗಳೊಂದಿಗೆ ಸಮುದ್ರ ಸೇರುವ ಮತ್ತೊಂದು ಕಪಿಲಾ ನದಿಯ ಉಲ್ಲೇಖವೂ ಪುರಾಣಗಳಲ್ಲಿ ಇದೆ.

೧೭. '[೧]**ವರಾಹತನಯಾ**' ಎಂದರೆ, ತುಂಗಭದ್ರೆ ಎಂದರ್ಥ. ಕುದುರೆಮುಖದ ಬಳಿಯ ವರಾಹಪರ್ವತ ಎಂಬಲ್ಲಿನ ಎರಡು ಶಿಖರಗಳನ್ನು ವರಾಹದೇವರ ಕೋರೆಗಳೆಂದು ಕರೆಯುವರು. ಅವುಗಳಿಂದ ಉದ್ಭವಿಸುವ ನದಿಗಳೇ ಈ ತುಂಗಾ ಹಾಗೂ ಭದ್ರೆ. ಇವೆರಡೂ ಸಹ ಮುಂದೆ ಶಿವಮೊಗ್ಗೆಯ ಬಳಿ ಕೂಡಲಿ ಎಂಬಲ್ಲಿ ಸಂಗಮಿಸಿ ತುಂಗಭದ್ರಾ ಎನ್ನಿಸುವವು. ನವವೃಂದಾವನ, ಮಂತ್ರಾಲಯದಲ್ಲಿರುವ ಅನೇಕ ವೈಷ್ಣವ ಯತಿಗಳ ಮೂಲ-ವೃಂದಾವನಗಳು ಈ ನದಿಯ ತೀರದಲ್ಲಿಯೇ ಇರುವುದು ವಿಶೇಷ. ಇದು ಕರ್ನೂಲು ಬಳಿಯ ನಿವೃತ್ತಿ ಸಂಗಮ ಎಂಬಲ್ಲಿ ಕೃಷ್ಣಾ ನದಿಯನ್ನು ಸೇರುವುದು. ದಕ್ಷಿಣ ಭಾರತದ ಅಪೂರ್ವಕ್ಷೇತ್ರಗಳಲ್ಲೊಂದಾದ ಹಂಪಿಯಲ್ಲಿ ಹರಿಯುವ ನದಿ ಇದೇ.

೧೮. '[೨]**ನೇತ್ರಾವತೀ**' ಎಂಬುದು ಸಹ ವರಾಹಪರ್ವತದಲ್ಲಿ ಹುಟ್ಟುವ ಮತ್ತೊಂದು ನದಿ. ತುಂಗಾ ಹಾಗು ಭದ್ರಾ ಎರಡೂ ಆ ಪರ್ವತದ ಕೋರೆಯಿಂದ ಉದ್ಭವಿಸಿದರೆ, ನೇತ್ರಾವತಿಯು ನೇತ್ರಗಳಿಂದ ಉದ್ಭವಿಸುವ ನದಿ. ಆದಕ್ಕೇ ನೇತ್ರಾವತೀ ಎಂದು ಹೆಸರು. ಕುಮಾರಧಾರಾ ಎಂಬುದು ಇದರ ಪ್ರಮುಖ ಉಪನದಿ. ಅವುಗಳ ಸಂಗಮಸ್ಥಾನದಲ್ಲಿ ಸಹಸ್ರಲಿಂಗೇಶ್ವರ ಎಂಬ ಕ್ಷೇತ್ರವಿದೆ. ಚಿಂತಾಮಣಿ ನರಸಿಂಹಕ್ಷೇತ್ರವಿರುವುದು ಈ ನದಿಯ ತೀರದಲ್ಲಿಯೇ. ಇದು ಮಂಗಳೂರಿನ ಬಳಿ ಅರಬ್ಬೀಸಮುದ್ರವನ್ನು ಸೇರುವುದು.

೧೯. '**ಆದಿ**' ಶಬ್ದದಿಂದ ಪಿನಾಕಿನೀ, ತಾಪೀ, ಮಲಾಪಹಾರೀ, ಕಾಗಿನೀ ಮೊದಲಾದ ಭರತಖಂಡದ ಇತರ ಎಲ್ಲ ನದಿಗಳನ್ನು ಸಹ ಗ್ರಹಿಸಬೇಕು.

೨೦. ಇವುಗಳಲ್ಲಿ ನೇರವಾಗಿ ಶ್ರೀವಿಷ್ಣುಪಾದದ ಸಂಪರ್ಕದಿಂದ ಉದ್ಭವಿಸಿದ ನದಿ ಗಂಗಾನದಿ. ವಿಷ್ಣುಪದಿ ಎಂಬುದು ಅದರ ವಿಶೇಷ ಹಿರಿಮೆ. ಆದರೆ, ಇಲ್ಲಿ ಎಲ್ಲ ನದಿಗಳನ್ನು ಸಹ ಹರಿಪಾದಕಮಲದಿಂದ ಜನಿಸಿದ ನದಿಗಳು ಎನ್ನಲಾಗಿದೆ. ಶ್ರೀವಿಷ್ಣುಪಾದವು ಸರ್ವತ್ರ ವ್ಯಾಪಿಸಿರುವುದರಿಂದ ಯಾವ ನದಿಯು ಎಲ್ಲೇ

---

೧. ನತೋಽಸ್ಮಿ ತುಂಗಾಂ ವಿಲಸತ್ತರಂಗಾಮಘೌಘಭಂಗಾಂ ಹರಿಪಾದಸಂಗಾಮ್ ।
ಶ್ರಿತೋಽಸ್ಮಿ ಭದ್ರಾಂ ಹೃತಪಾಪನಿದ್ರಾಂ ವಿಮುಕ್ತಿಪದ್ಯಾಂ ವಿಮಲೈಕಸಾಧ್ಯಾಮ್ ॥
– ತೀರ್ಥಪ್ರಬಂಧ (ಪೂ.ಪ್ರ/೧೧)

೨. ವರಾಹನಯನಾನಂದಧಾರಾ ನೇತ್ರಾವತೀಸರಿತ್ ।
ಶುಷ್ಕಾಂ ತದ್ಭಕ್ತಿಲತಿಕಾಂ ಪುಷ್ಣಾತಿ ಕಥಮನ್ಯಥಾ ॥ – ತೀರ್ಥಪ್ರಬಂಧ (ಪ.ಪ್ರ/೩.೨)

ಹುಟ್ಟಿದರೂ ಸಹ ಅದು ಶ್ರೀಹರಿಯ ಪಾದಕಮಲದಿಂದಲೇ ಜನಿಸಿದ್ದು ಎಂದು ತಿಳಿಯಬೇಕು ಎಂಬುದು ಇದಕ್ಕೆ ಒಂದು ಕಾರಣ. ನದಿಗಳ ನೀರಿನ ಬಹುಭಾಗ ಸಾಮಾನ್ಯವಾಗಿ ತುಂಬಿಕೊಳ್ಳುವುದು ಮಳೆಯಿಂದ, ಮಳೆ ಸುರಿಯುವುದು ಮೋಡಗಳಿಂದ, ಮೋಡಗಳಿರುವುದು ಗಗನದಲ್ಲಿ, ಗಗನಕ್ಕೆ ವಿಷ್ಣುಪದ ಎಂದು ಹೆಸರು. ಆದ್ದರಿಂದ ಎಲ್ಲ ನದಿಗಳು ಸಹ ಹರಿಪಾದಕಂಜದಿಂದ ಪ್ರಾದೂರ್ಭೂತ ಎಂಬ ಮಾತು ಅತ್ಯಂತ ಸಂಗತವಾಗಿದೆ. ಸಾಮಾನ್ಯವಾಗಿ ಬಾವಿತೋಡುವಾಗ ನೀರು ಕಂಡುಬಂದ ಕೂಡಲೇ 'ಗಂಗೆ ಬಂದಳು' ಎಂದೇ ವ್ಯವಹಾರ ಹೊರತು ನೀರು ಬಂದಿತು ಎಂದಲ್ಲ. ಹೀಗೆ ಸಕಲ ಜಲವೂ ಸಹ ಶ್ರೀವಿಷ್ಣುಪಾದೋದಕವೇ ಆಗಿದೆ ಎಂಬ ಇಲ್ಲಿಯ ನಿರೂಪಣೆ ಅತ್ಯಂತ ತಾತ್ತ್ವಿಕವಾದುದು. ಹರಿಯುವ ಸಕಲ ನದಿಗಳು ಸೇರುವುದು ಸಹ ಸಮುದ್ರವನ್ನೇ. ಹರಿಯುವ ನೀರು ಸಮುದ್ರ ಸೇರುವಂತೆ, ಉದಿಸುವ ನೀರು ವಿಷ್ಣುಪಾದೋದಕವೇ ಆಗಿದೆ ಎಂಬಲ್ಲಿ ಅಪಾರ ಔಚಿತ್ಯವು ಇದೆ. ಪ್ರತಿನಿತ್ಯ ಮೀಯುವಾಗ ವಿಹಿತವಾದ ಗಂಗಾಸ್ಮರಣೆ ವಿಷ್ಣುಪಾದೋದಕ ಸ್ಮರಣೆಯಾಗಿದ್ದು ಈ ಚಿಂತನೆಗೆ ಪೋಷಕವಾಗಿದೆ.

೨೧. 'ಪಾದೋಽಸ್ಯ ವಿಶ್ವಾಭೂತಾನಿ' ಎಂಬ ಪುರುಷಸೂಕ್ತದ ಮಾತಿನಲ್ಲಿ ಸಕಲ ಜಗತ್ತು ಭಗವಂತನ ಪಾದದಲ್ಲಿ ಆಶ್ರಿತ ಎಂದು ವರ್ಣಿತವಾಗಿರುವುದರಿಂದ, ಭೂಮಿಯಲ್ಲಿನ ಸಕಲ ನದಿಗಳು ಸಹ ಶ್ರೀಹರಿಯ ಪಾದಕಮಲದಿಂದ ಹುಟ್ಟಿ ಬಂದವುಗಳು ಎಂಬ ಮಾತು ಅರ್ಥವತ್ತಾದುದು ಎಂದು ತಿಳಿಯಬಹುದು.

೨೨. ಹೀಗೆ ನದಿಗಳು ನಮಗೆ ಮಂಗಲವನ್ನುಂಟುಮಾಡಲಿ ಎಂದು ಪ್ರಾರ್ಥಿಸಿ-ರುವುದು ಗಮನಿಸಬೇಕಾದ ಅಂಶ. ನೀರು ಸಹಜವಾಗಿ ಶುದ್ಧಿಗೆ ಅತ್ಯಗತ್ಯವಾದ ವಸ್ತು. ನೀರಿಲ್ಲದ ಮಡಿಯ ಕಲ್ಪನೆ ಊಹೆಗೂ ನಿಲುಕದು: ಆಪಃ ಸ್ವಭಾವತೋ ಮೇಧ್ಯಾಃ ಎಂಬ ಮಾತಿನಲ್ಲಿ ನೀರು ಶುದ್ಧಿಯ ಸಂಕೇತ ಎಂದೇ ನಿರೂಪಿತವಾಗಿದೆ. ನೀರಿನ ಸ್ನಾನವಿರಲಿ, ಅದರ ಪ್ರೋಕ್ಷಣೆಯು ಸಹ ಶುದ್ಧಿಕರ ಎಂದಿವೆ ಶಾಸ್ತ್ರಗಳು. ಅದರಲ್ಲೂ ಮಹಾನದಿಗಳು, ಮಹಾನದಿಗಳನ್ನು ಸೇರುವ ಉಪನದಿಗಳು ಅತ್ಯಂತ ಪಾವನ ಎಂದು ಪ್ರತ್ಯೇಕ ಹೇಳಬೇಕಿಲ್ಲ.

೨೩. ಕೃಷ್ಣಾಮೃತಮಹಾರ್ಣವದಲ್ಲಿನ ಶ್ರೀಮದಾಚಾರ್ಯರ ಈ ಕೆಳಗಿನ ಮಾತುಗಳು ನದಿಗಳ ತಾರತಮ್ಯ ಹಾಗೂ ಪಾವಿತ್ರ್ಯವನ್ನು ಅಪೂರ್ವರೀತಿಯಲ್ಲಿ ತಿಳಿಸಿಕೊಡುವವು.

ತ್ರಿರಾತ್ರಫಲದಾ ನದ್ಯೋ ಯಾಃ ಕಾಶ್ಚಿದಸಮುದ್ರಗಾಃ
ಸಮುದ್ರಗಾಸ್ತು ಪಕ್ಷಸ್ಯ ಮಾಸಸ್ಯ ಸರಿತಾಂ ಪತಿಃ ।

ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ॥

– ಸಮುದ್ರ ಸೇರದ ನದಿಗಳು ಮೂರುರಾತ್ರಿಗಳ ಯಜ್ಞಾದಿಗಳ ಫಲವನ್ನು ನೀಡುವವು; ಸಮುದ್ರ ಸೇರುವ ನದಿಗಳು ಒಂದು ಪಕ್ಷದ ಯಾಗದ ಫಲವನ್ನು ನೀಡುವವು; ನದಿಗಳ ಒಡೆಯನಾದ ಸಮುದ್ರವು ಒಂದು ತಿಂಗಳ ಯಾಗದ ಫಲವನ್ನು ನೀಡುವುದು; ಗೋದಾವರಿಯು ಆರು ತಿಂಗಳ ಯಾಗದ ಫಲವನ್ನು ಕೊಡುವುದು; ಗಂಗೆಯು ಒಂದು ವರ್ಷದ ಯಾಗ ಫಲವನ್ನು ಕೊಡುವುದು; ಆದರೆ ಇವು ಯಾವುವೂ ವಿಷ್ಣುಪಾದೋದಕದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸವು.

೨೪. ಇವುಗಳೊಂದಿಗೆ ಶ್ರೀಮದ್ಭಾಗವತಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿರುವ ಭರತ-ಖಂಡದ ಇತರ ನದಿಗಳನ್ನು ಸಹ ಸ್ಮರಿಸಬೇಕು[೧].

೨೫. ಇಲ್ಲಿ ನದಿಗಳು ಎಂಬುದರಿಂದ ಪವಿತ್ರವಾದ ಸ್ವಾಮಿಪುಷ್ಕರಣಿ, ಮಧ್ವಸರೋವರ, ಚಂದ್ರಪುಷ್ಕರಣಿ ಮೊದಲಾದ ಸರೋವರಗಳು, ಪುಣ್ಯತೀರ್ಥಗಳು ಸಹ ವಿವಕ್ಷಿತ.

೨೬. ಇಲ್ಲಿಯೂ ಸಹ ನದಿಗಳು ಎಂದರೆ ನದಿಗಳ ಅಭಿಮಾನಿದೇವತೆಗಳು ಎಂದರ್ಥ: ನ ಹ್ಯಮ್ಮಯಾನಿ ತೀರ್ಥಾನಿ (ಶ್ರೀಮದ್ಭಾಗವತ).

೨೭. ಇತರ ಶ್ಲೋಕಗಳಲ್ಲಿ ಹೇಗೋ ಹಾಗೆ ನದಿಗಳನ್ನು ಉಲ್ಲೇಖಿಸುವ ಈ ಶ್ಲೋಕದಲ್ಲೂ ಅವುಗಳ ತಾರತಮ್ಯಕ್ರಮವನ್ನು ಅನುಸರಿಸಿಲ್ಲ; ಅಂತಹ ನದೀ-ತಾರತಮ್ಯವನ್ನು ಶ್ರೀರಾಘವೇಂದ್ರಸ್ವಾಮಿಗಳ ನದೀತಾರತಮ್ಯಸ್ತೋತ್ರ ಮೊದಲಾದ-ವುಗಳಿಂದ ತಿಳಿದುಕೊಳ್ಳಬೇಕು[೨].

---

೧. ಏತಾಸಾಮಪೋ ಭಾರತ್ಯಃ ಪ್ರಜಾ ನಾಮಭಿರೇವ ಪುನಂತೀನಾಮಾತ್ಮನಾ ಚೋಪಸ್ಪೃಶಂತಿ ॥ ಚಂದ್ರವಟಾ ತಾಮ್ರಪರ್ಣೀ ಅವಟೋದಾ ಘೃತಮಾಲಾ ವೈಹಾಯಸೀ ಕಾವೇರೀ ವೇಣೀ ಪಯೋದಾ ಶರ್ಕರಾವರ್ತಾ ತುಂಗಭದ್ರಾ ಕೃಷ್ಣಾ ಭೀಮರಥೀ ಗೋದಾವರೀ ನಿರ್ವಿಂಧ್ಯಾ ಪಯುಷ್ಣೀ ತಾಪೀ ರೇವಾ ಸುರಸಾ ನರ್ಮದಾ ಚರ್ಮಣ್ವತೀ ಅಂಧಃಶೋಣಶ್ಚ ಮಹಾನದೌ ವೇದಸ್ಮೃತಿರ್ಋಷಿಕುಲ್ಯಾ ತ್ರಿಸಾಮಾ ಕೌಶಿಕೀ ಮಂದಾಕಿನೀ ಯಮುನಾ ಸರಸ್ವತೀ ದೃಷದ್ವತೀ ಗೋಮತೀ ಸರಯೂ ರೋಧವತೀ ಸಪ್ತವತೀ ಸುಷೋಮಾ ಶತದ್ರೂರ್ಚಂದ್ರಭಾಗಾ ಮರುದ್ವೃಧಾ ವಿತಸ್ತಾ ಅಸಿಕ್ನೀ ವಿಶ್ವೇತಿ ಮಹಾನದ್ಯಃ ॥ – ಶ್ರೀಮದ್ಭಾಗವತ (೫/೧೯/೧೭,೧೮

೨. ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ ।
ತತೋ ಗೋದಾವರೀ ನ್ಯೂನಾ ಕೃಷ್ಣವೇಣೀ ತತೋಽಧಮಾ ॥
ಸ್ವಾಮಿಚಂದ್ರಾಪುಷ್ಕರಿಣ್ಯೌ ಮಾನಸಂ ಚ ಸರೋವರಮ್ ।
ಕೃಷ್ಣವೇಣ್ಯಾಃ ಸಮಾಸ್ತಾಭ್ಯಃ ಕಾವೇರೀ ಚ ಸರಸ್ವತೀ ॥
ಹೀನೇಽನ್ಯೋನ್ಯಸಮೇ ತಾಭ್ಯಾಮೂನಾ ಚ ಸರಯೂ ತಥಾ ।
ತುಂಗಭದ್ರಾ ಸಮಾ ತಸ್ಯಾಃ ಕಾಲಿಂದ್ಯೂನಾ ತತೋಽಧಮಾ ॥

೨೮. ಈ ಶ್ಲೋಕದ ಮೂರನೆಯ ಪಾದಕ್ಕೆ 'ಕಾವೇರೀ ಕಪಿಲಾ ಪ್ರಯಾಗ ಕಿಟಿಜಾ ನೇತ್ರಾವತೀತ್ಯಾದಯೋ' ಎಂಬ ಪಾಠಾಂತರವಿದೆ. ಅಲ್ಲಿಯ ಪ್ರಯಾಗ ಎಂದರೆ, ವಿಶ್ವವಿಖ್ಯಾತವಾಗಿರುವ ತ್ರಿವೇಣಿ ಸಂಗಮ ಕ್ಷೇತ್ರ. ಅದು ಗಂಗಾ, ಯಮುನಾ ಹಾಗೂ ಸರಸ್ವತೀ ನದಿಗಳ ಸಂಗಮ. ಕಿಟಿಜಾ (ಕಿಟಿ-ವರಾಹ; ಜಾ-ಜನಿಸಿದವಳು) ಎಂದರೆ ವರಾಹತನಯಾ ಎಂದೇ ಅರ್ಥ.

೨೯. ಭರತಖಂಡದ ಪುಣ್ಯನದಿಗಳು ಸಾವಿರಾರು; ಅವುಗಳಲ್ಲಿ ಗಂಗೆಗೆ ಅಗ್ರಸ್ಥಾನ ವಿಷ್ಣುಪಾದೋದಕ ಎಂಬ ಹಿರಿಮೆ ಅದರದು. ಸ್ವರ್ಗ, ಮರ್ತ್ಯ, ಪಾತಾಳ ಹೀಗೆ ಮೂರು ಲೋಕಗಳಲ್ಲೂ ಹರಿಯುವ ನದಿಯಾದ್ದರಿಂದ ಅದು ತ್ರಿಪಥಗಾ ಎನ್ನಿಸಿದೆ. ವರಾಹಪುರಾಣದಲ್ಲಿ ಗಂಗಾ ದ್ವಾದಶನಾಮಸ್ತೋತ್ರ ಬಂದಿದೆ. ಗಂಗೆಯನ್ನೊಳಗೊಂಡಂತೆ ಗೋದಾವರೀ ಮೊದಲಾದ ಸಕಲ ನದಿಗಳಲ್ಲಿ ತೀರ್ಥಗಳಲ್ಲಿ ಸ್ನಾನಮಾಡುವಾಗ ಆ ನದೀ ಅಭಿಮಾನಿದೇವತೆಗೆ ಅರ್ಘ್ಯ ನೀಡಬೇಕು; ಪ್ರತಿಯೊಂದು ನದಿಗೂ ಸಹ ನಿಯಾಮಕ ಭಗವದ್ರೂಪವಿದ್ದು, ಅದನ್ನು ಪುರಾಣಗಳಿಂದ ತಿಳಿದುಕೊಳ್ಳಬೇಕು; ಆಯಾ ನದಿಯಲ್ಲಿ ಸ್ನಾನ ಮಾಡುವಾಗ ಆ ನದಿಯ ಅಭಿಮಾನಿದೇವತೆಯ ಅಂತರ್ಯಾಮಿಯಾದ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಭಗವದ್ರೂಪವನ್ನು ತಪ್ಪದೇ ಸ್ಮರಿಸಬೇಕು; ಗ್ರಹಣ ಕಾಲದಲ್ಲಿ ನದೀ ಸ್ನಾನ ವಿಶೇಷ ಪುಣ್ಯಕರ. ಸಮುದ್ರವು ತೀರ್ಥರಾಜ ಎನ್ನಿಸಿದ್ದು ಅದರ ಸ್ನಾನ ವಿಶೇಷ ಪುಣ್ಯಕರ.

*****

---

ನರ್ಮದಾ ಸಿಂಧುಸರಿತೌ ತತ್ಸಮಾ ಭವನಾಶಿನೀ ।
ತತಃ ಕುಮುದ್ವತೀ ನೀಚಾ ತತೋ ನೀಚಾ ಮಲಾಪಹಾ ॥
ತಾಮ್ರಪರ್ಣೀ ಭೀಮರಥೀ ವಂಜುಲಾ ಚ ಪಿನಾಕಿನೀ ।
ಪೃಥಕ್ ಸಾಗರಗಾಮಿನ್ಯೋ ನದ್ಯೋ ಭೀಮರಥೀಸಮಾಃ ॥
ತತೋಽನ್ಯಾ ಸರಿತೋ ನೀಚಾಸ್ತಟಾಕಾಶ್ಚ ತತೋಽಧಮಾಃ ।
ತತೋ ನೀಚಾಃ ಪುಷ್ಕರಿಣ್ಯೋ ದೇವಖಾತಾಶ್ಚ ತತ್ಸಮಾಃ ॥
ತತೋ ವಾಪ್ಯೋಽಧಮಾಸ್ತಾಭ್ಯಃ ಕೂಪಾಃ ಸರ್ವಾಧಮಾ ಮತಾಃ ।
ಸ್ವೋತ್ತಮಾರ್ಘ್ಯಂ ಪ್ರದಾತವ್ಯಮವರಾಸು ನ ಚಾನ್ಯಥಾ ॥
ರಾಘವೇಂದ್ರೇಣ ಯತಿನಾ ಬ್ರಹ್ಮಾಂಡಾಖ್ಯಪುರಾಣಗಃ ।
ಇತ್ಯುದ್ಧೃತಃ ಸಾರಭಾಗೋ ನದೀನೀಚೋಚ್ಚಸೂಚಕಃ ॥
– ಶ್ರೀರಾಘವೇಂದ್ರತೀರ್ಥಶ್ರೀಪಾದ ವಿರಚಿತ ನದೀತಾರತಮ್ಯಸ್ತೋತ್ರಮ್

೧. ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।
ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।
ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ॥
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ । – ವರಾಹಪುರಾಣ

ಷಣ್ಮಾಸಫಲದಾ ಗೋದಾ ವತ್ಸರಸ್ಯ ತು ಜಾಹ್ನವೀ
ವಿಷ್ಣುಪಾದೋದಕಸ್ಯೈತಾಃ ಕಲಾಂ ನಾರ್ಹಂತಿ ಷೋಡಶೀಮ್ ॥

– ಸಮುದ್ರ ಸೇರದ ನದಿಗಳು ಮೂರುರಾತ್ರಿಗಳ ಯಜ್ಞಾದಿಗಳ ಫಲವನ್ನು ನೀಡುವವು; ಸಮುದ್ರ ಸೇರುವ ನದಿಗಳು ಒಂದು ಪಕ್ಷದ ಯಾಗದ ಫಲವನ್ನು ನೀಡುವವು; ನದಿಗಳ ಒಡೆಯನಾದ ಸಮುದ್ರವು ಒಂದು ತಿಂಗಳ ಯಾಗದ ಫಲವನ್ನು ನೀಡುವುದು; ಗೋದಾವರಿಯು ಆರು ತಿಂಗಳ ಯಾಗದ ಫಲವನ್ನು ಕೊಡುವುದು; ಗಂಗೆಯು ಒಂದು ವರ್ಷದ ಯಾಗ ಫಲವನ್ನು ಕೊಡುವುದು; ಆದರೆ ಇವು ಯಾವುವೂ ವಿಷ್ಣುಪಾದೋದಕದ ಹದಿನಾರನೆಯ ಒಂದಂಶಕ್ಕೂ ಸಾಟಿಯೆನ್ನಿಸವು.

೨೪. ಇವುಗಳೊಂದಿಗೆ ಶ್ರೀಮದ್ಭಾಗವತಪುರಾಣದಲ್ಲಿ ಉಲ್ಲೇಖಿಸಲ್ಪಟ್ಟಿರುವ ಭರತ-ಖಂಡದ ಇತರ ನದಿಗಳನ್ನು ಸಹ ಸ್ಮರಿಸಬೇಕು[೧].

೨೫. ಇಲ್ಲಿನದಿಗಳು ಎಂಬುದರಿಂದ ಪವಿತ್ರವಾದ ಸ್ವಾಮಿಪುಷ್ಕರಣಿ, ಮಧ್ವಸರೋವರ, ಚಂದ್ರಪುಷ್ಕರಣಿ ಮೊದಲಾದ ಸರೋವರಗಳು, ಪುಣ್ಯತೀರ್ಥಗಳು ಸಹ ವಿವಕ್ಷಿತ.

೨೬. ಇಲ್ಲಿಯೂ ಸಹ ನದಿಗಳು ಎಂದರೆ ನದಿಗಳ ಅಭಿಮಾನಿದೇವತೆಗಳು ಎಂದರ್ಥ: ನ ಹ್ಯಮ್ಮಯಾನಿ ತೀರ್ಥಾನಿ (ಶ್ರೀಮದ್ಭಾಗವತ).

೨೭. ಇತರ ಶ್ಲೋಕಗಳಲ್ಲಿ ಹೇಗೋ ಹಾಗೆ ನದಿಗಳನ್ನು ಉಲ್ಲೇಖಿಸುವ ಈ ಶ್ಲೋಕದಲ್ಲೂ ಅವುಗಳ ತಾರತಮ್ಯಕ್ರಮವನ್ನು ಅನುಸರಿಸಿಲ್ಲ; ಅಂತಹ ನದೀ-ತಾರತಮ್ಯವನ್ನು ಶ್ರೀರಾಘವೇಂದ್ರಸ್ವಾಮಿಗಳ ನದೀತಾರತಮ್ಯಸ್ತೋತ್ರ ಮೊದಲಾದ-ವುಗಳಿಂದ ತಿಳಿದುಕೊಳ್ಳಬೇಕು[೨].

---

೧. ಏತಾಸಾಮಪೋ ಭಾರತ್ಯಃ ಪ್ರಜಾ ನಾಮಭಿರೇವ ಪುನಂತೀನಾಮಾತ್ಮನಾ ಚೋಪಸ್ಪೃಶಂತಿ ॥ ಚಂದ್ರವಟಾ ತಾಮ್ರಪರ್ಣೀ ಅವಟೋದಾ ಘೃತಮಾಲಾ ವೈಹಾಯಸೀ ಕಾವೇರೀ ವೇಣೀ ಪಯೋದಾ ಶರ್ಕರಾವರ್ತಾ ತುಂಗಭದ್ರಾ ಕೃಷ್ಣಾ ಭೀಮರಥೀ ಗೋದಾವರೀ ನಿರ್ವಿಂಧ್ಯಾ ಪರುಷ್ಣೀ ತಾಪೀ ರೇವಾ ಸುರಸಾ ನರ್ಮದಾ ಚರ್ಮಣ್ವತೀ ಅಂಧಃಶೋಣಶ್ಚ ಮಹಾನದೌ ವೇದಸ್ಮೃತಿರ್ಋಷಿಕುಲ್ಯಾ ತ್ರಿಸಾಮಾ ಕೌಶಿಕೀ ಮಂದಾಕಿನೀ ಯಮುನಾ ಸರಸ್ವತೀ ದೃಷದ್ವತೀ ಗೋಮತೀ ಸರಯೂ ರೋಧವತೀ ಸಪ್ತವತೀ ಘೋಣಾ ಸುಷೋಮಾ ಶತಮಾಲಾ ಚಂದ್ರಭಾಗಾ ಶುತುದ್ರೀ ಮರುದ್ವೃಧಾ ವಿತಸ್ತಾ ಅಸಿಕ್ನೀ ವಿಶ್ವೇತಿ ಮಹಾನದ್ಯಃ ॥
– ಶ್ರೀಮದ್ಭಾಗವತ (೫/೧೯/೧೭,೧೮

೨. ವಿಷ್ಣುಪಾದಾಬ್ಜಸಂಭೂತಾ ಗಂಗಾ ಸರ್ವಾಧಿಕಾ ಮತಾ ।
ತತೋ ಗೋದಾವರೀ ನ್ಯೂನಾ ಕೃಷ್ಣವೇಣೀ ತತೋಽಧಮಾ ॥
ಸ್ವಾಮಿಚಂದ್ರಾಪುಷ್ಕರಿಣ್ಯೌ ಮಾನಸಂ ಚ ಸರೋವರಮ್ ।
ಕೃಷ್ಣವೇಣ್ಯಾಃ ಸಮಾಸ್ತಾಭ್ಯಃ ಕಾವೇರೀ ಚ ಸರಸ್ವತೀ ॥
ಹೀನೇಽನ್ಯೋನ್ಯಸಮೇ ತಾಭ್ಯಾಮೂನಾ ಚ ಸರಯೂ ತಥಾ ।
ತುಂಗಭದ್ರಾ ಸಮಾ ತಸ್ಯಾಃ ಕಾಲಿಂದ್ಯೂನಾ ತತೋಽಧಮಾ ॥

೨೮. ಈ ಶ್ಲೋಕದ ಮೂರನೆಯ ಪಾದಕ್ಕೆ 'ಕಾವೇರೀ ಕಪಿಲಾ ಪ್ರಯಾಗ ಕಿಟಿಜಾ ನೇತ್ರಾವತೀತ್ಯಾದಯೋ' ಎಂಬ ಪಾಠಾಂತರವಿದೆ. ಅಲ್ಲಿಯ ಪ್ರಯಾಗ ಎಂದರೆ, ವಿಶ್ವವಿಖ್ಯಾತವಾಗಿರುವ ತ್ರಿವೇಣಿ ಸಂಗಮ ಕ್ಷೇತ್ರ. ಅದು ಗಂಗಾ, ಯಮುನಾ ಹಾಗೂ ಸರಸ್ವತೀ ನದಿಗಳ ಸಂಗಮ. ಕಿಟಿಜಾ (ಕಿಟಿ-ವರಾಹ; ಜಾ-ಜನಿಸಿದವಳು) ಎಂದರೆ ವರಾಹತನಯಾ ಎಂದೇ ಅರ್ಥ.

೨೯. ಭರತಖಂಡದ ಪುಣ್ಯನದಿಗಳು ಸಾವಿರಾರು; ಅವುಗಳಲ್ಲಿ ಗಂಗೆಗೆ ಅಗ್ರಸ್ಥಾನ ವಿಷ್ಣುಪಾದೋದಕ ಎಂಬ ಹಿರಿಮೆ ಅದರದು. ಸ್ವರ್ಗ, ಮರ್ತ್ಯ, ಪಾತಾಳ ಹೀಗೆ ಮೂರು ಲೋಕಗಳಲ್ಲೂ ಹರಿಯುವ ನದಿಯಾದ್ದರಿಂದ ಅದು ತ್ರಿಪಥಗಾ ಎನ್ನಿಸಿದೆ. ವರಾಹಪುರಾಣದಲ್ಲಿ ಗಂಗಾ ದ್ವಾದಶನಾಮಸ್ತೋತ್ರ ಬಂದಿದೆ[1]. ಗಂಗೆಯನ್ನೊಳಗೊಂಡಂತೆ ಗೋದಾವರೀ ಮೊದಲಾದ ಸಕಲ ನದಿಗಳಲ್ಲಿ ತೀರ್ಥಗಳಲ್ಲಿ ಸ್ನಾನಮಾಡುವಾಗ ಆ ನದೀ ಅಭಿಮಾನಿದೇವತೆಗೆ ಅರ್ಘ್ಯ ನೀಡಬೇಕು; ಪ್ರತಿಯೊಂದು ನದಿಗೂ ಸಹ ನಿಯಾಮಕ ಭಗವದ್ರೂಪವಿದ್ದು ಅದನ್ನು ಪುರಾಣಗಳಿಂದ ತಿಳಿದುಕೊಳ್ಳಬೇಕು; ಆಯಾ ನದಿಯಲ್ಲಿ ಸ್ನಾನ ಮಾಡುವಾಗ ಆ ನದಿಯ ಅಭಿಮಾನಿದೇವತೆಯ ಅಂತರ್ಯಾಮಿಯಾದ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಭಗವದ್ರೂಪವನ್ನು ತಪ್ಪದೇ ಸ್ಮರಿಸಬೇಕು; ಗ್ರಹಣ ಕಾಲದಲ್ಲಿ ನದೀ ಸ್ನಾನ ವಿಶೇಷ ಪುಣ್ಯಕರ. ಸಮುದ್ರವು ತೀರ್ಥರಾಜ ಎನ್ನಿಸಿದ್ದು ಅದರ ಸ್ನಾನ ವಿಶೇಷ ಪುಣ್ಯಕರ.

★★★★★

---

ನರ್ಮದಾ ಸಿಂಧುಸರಿತೌ ತತ್ಸಮಾ ಭವನಾಶಿನೀ ।
ತತಃ ಕುಮುದ್ವತೀ ನೀಚಾ ತತೋ ನೀಚಾ ಮಲಾಪಹಾ ॥
ತಾಮ್ರಪರ್ಣೀ ಭೀಮರಥೀ ವಂಜುಲಾ ಚ ಪಿನಾಕಿನೀ ।
ಪೃಥಕ್ ಸಾಗರಗಾಮಿನ್ಯೋ ನದ್ಯೋ ಭೀಮರಥೀಸಮಾಃ ॥
ತತೋಽನ್ಯಾ ಸರಿತೋ ನೀಚಾಸ್ತಟಾಕಾಶ್ಚ ತತೋಽಧಮಾಃ ।
ತತೋ ನೀಚಾಃ ಪುಷ್ಕರಿಣ್ಯೋ ದೇವಖಾತಾಶ್ಚ ತತ್ಸಮಾಃ ॥
ತತೋ ವಾಪ್ಯೋಽಧಮಾಸ್ತಾಭ್ಯಃ ಕೂಪಾಃ ಸರ್ವಾಧಮಾ ಮತಾಃ ।
ಸ್ತೋತ್ತಮಾರ್ಘ್ಯಂ ಪ್ರದಾತವ್ಯಮವರಾಸು ನ ಚಾನ್ಯಥಾ ॥
ರಾಘವೇಂದ್ರೇಣ ಯತಿನಾ ಬ್ರಹ್ಮಾಂಡಾಖ್ಯಪುರಾಣಗಃ ।
ಇತ್ಯುದ್ಧೃತಃ ಸಾರಭಾಗೋ ನದೀನೀಚೋಚ್ಚಸೂಚಕಃ ॥
– ಶ್ರೀರಾಘವೇಂದ್ರತೀರ್ಥಶ್ರೀಪಾದ ವಿರಚಿತ ನದೀತಾರತಮ್ಯಸ್ತೋತ್ರಮ್

೧. ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।
ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।
ದ್ವಾದಶೈತಾನಿ ನಾಮಾನಿ ಯತ್ರ ಯತ್ರ ಜಲಾಶಯೇ ॥
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ । – ವರಾಹಪುರಾಣ

## - ೭ -

## ಹರಿಯ ಹಿರಿಮೆ ಸಾರುವ ಶಬ್ದರಾಶಿ

**ವೇದಾಶ್ಚೋಪನಿಷದ್ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ**
**ವೇದಾಂತಾ ಅಪಿ ಮಂತ್ರತಂತ್ರಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ ।**
**ಕಾವ್ಯಾಲಂಕೃತಿನೀತಿನಾಟಕಯುತಾಃ ಶಬ್ದಾಶ್ಚ ನಾನಾವಿಧಾಃ[೧]**
**[೨]ಶ್ರೀವಿಷ್ಣೋರ್ಗುಣರಾಶಿಕೀರ್ತನಪರಾಃ ಕುರ್ವಂತು ನೋ ಮಂಗಲಮ್ ॥**

ಪದಚ್ಛೇದ : ವೇದಾಃ, ಚ, ಉಪನಿಷದ್ಗಣಾಃ, ಚ, ವಿವಿಧಾಃ, ಸಾಂಗಾಃ, ಪುರಾಣಾನ್ವಿತಾಃ, ವೇದಾಂತಾಃ, ಅಪಿ, ಮಂತ್ರತಂತ್ರಸಹಿತಾಃ, ತರ್ಕಾಃ, ಸ್ಮೃತೀನಾಂ, ಗಣಾಃ, ಕಾವ್ಯಾಲಂಕೃತಿನೀತಿನಾಟಕಯುತಾಃ, ಶಬ್ದಾಃ, ಚ, ನಾನಾವಿಧಾಃ, ಶ್ರೀವಿಷ್ಣೋಃ, ಗುಣರಾಶಿಕೀರ್ತನಪರಾಃ, ಕುರ್ವಂತು, ನಃ, ಮಂಗಲಮ್.

**ಅನುವಾದ: ಸದಾ ಮಹಾವಿಷ್ಣುವಿನ ಗುಣರಾಶಿಗಳನ್ನೇ ಕೊಂಡಾಡುವ; ವೇದಗಳು, ಬಗೆಬಗೆಯ ಉಪನಿಷತ್ತಿನ ಸಮೂಹಗಳು, ವೇದಾಂಗಗಳು, ಪುರಾಣಗಳು ಹಾಗೆಯೇ ವೇದಾಂತಗಳು, ಮಂತ್ರ-ತಂತ್ರ-ತರ್ಕ ಶಾಸ್ತ್ರಗಳು, ಸ್ಮೃತಿಗಳ ರಾಶಿ, ಕಾವ್ಯಗಳು, ಅಲಂಕಾರಗ್ರಂಥಗಳು, ನೀತಿ ಗ್ರಂಥಗಳು, ನಾಟಕಗಳು ಮತ್ತು ನಾನಾವಿಧವಾದ ಶಬ್ದಗಳು ನಮಗೆ ಸದಾ ಮಂಗಳ-ವನ್ನುಂಟುಮಾಡಲಿ.**

ವಿ. ೧: ಸಮಸ್ತ ಶಾಸ್ತ್ರಪ್ರಪಂಚವು ಸಹ ನಮ್ಮ ಒಳಿತಿಗೆ ಕಾರಣವಾಗಲಿ ಎಂಬ ಚಿಂತನೆ ಈ ಶ್ಲೋಕದಲ್ಲಿದೆ.

೨. ಇಲ್ಲಿ ಶಾಸ್ತ್ರಗಳು ಶಬ್ದಗಳು ಎಂದರೆ, ಅವುಗಳ ಅಭಿಮಾನಿ ದೇವತೆಗಳು ಎಂದು ತಿಳಿಯಬೇಕು: ಮೃದಬ್ರವೀತ್ (ಮಣ್ಣು ಮಾತಾಡಿತು) ಎಂಬಲ್ಲಿ ಹೇಗೋ ಹಾಗೆ.

೩. **'ವೇದಗಳು'** ಎಂದರೆ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವಣವೇದ ಎಂಬ ನಾಲ್ಕು ವೇದಗಳು ಹಾಗೂ 'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಎಂಬ ಮಾತಿನಿಂದ ಪಂಚಮವೇದ ಎಂಬುದಾಗಿ ಗೃಹೀತವಾಗಿರುವ

---

೧. ಸಾಂಖ್ಯಂ ಯೋಗಂ ಚ ಪರಮಂ ಹವ್ಯಂ ಕವ್ಯಂ ತಥೈವ ಚ ॥ - ಮಹಾಭಾರತ (ಆ.ಪ/೧೫೦/೫೪)

೨. ಶ್ರೀವಿಷ್ಣೋರ್ಗುಣನಾಮಕೀರ್ತನಪರಾಃ (ಪಾ.)

ಇತಿಹಾಸಪುರಾಣಗಳು ವಿವಕ್ಷಿತ. ಪುರಾಣಗಳ ಉಲ್ಲೇಖ ಮುಂದೆಯೂ ಬಂದಿದೆ. ಪುರಾಣಗಳಿಗಿಂತ ಇತಿಹಾಸಕ್ಕೆ ಹೆಚ್ಚು ಪ್ರಾಧಾನ್ಯ. ಆದರಲ್ಲೂ ಮಹಾಭಾರತವು ಪ್ರತ್ಯೇಕವಾಗಿಯೇ ಪಂಚಮವೇದ ಎಂಬುದಾಗಿ ಪರಿಗಣಿತವಾಗಿರುವ ಮಹತ್ತರವಾದ ಕೃತಿ; ಕಾರ್ಷ್ಣವೇದ ಎಂಬ ಹೆಸರೂ ಆದಕ್ಕಿದೆ.

೪. '**ಉಪನಿಷತ್ತುಗಳು**' ಎಂದರೆ ಮಂತ್ರ, ಬ್ರಾಹ್ಮಣ, ಆರಣ್ಯಕ ಹಾಗೂ ಉಪನಿಷತ್ತು ಎಂಬ ವೇದಗಳ ನಾಲ್ಕು ಪ್ರಬೇಧಗಳಲ್ಲಿ ಕೊನೆಯದು ಎಂದರ್ಥ. ಉಪನಿಷತ್ ಎಂಬುದಕ್ಕೆ ಗುರುಗಳ ಬಳಿಯಲ್ಲಿಯೇ ಕುಳಿತು ಕಲಿಯುವ ಅಧ್ಯಾತ್ಮವಿದ್ಯೆ ಎಂದು, ರಹಸ್ಯ ವಿದ್ಯೆ ಎಂದು ಅರ್ಥ. ಇಂತಹ ಉಪನಿಷತ್ತುಗಳ ಸಂಖ್ಯೆ ಅಪಾರ. ವೇದಗಳು ಅನಂತ ಆಗಿರುವುದರಿಂದ ಅವುಗಳಿಗೆ ಸಂಬಂಧಿಸಿದಂತೆ ಉಪನಿಷತ್ತುಗಳು ಸಹ ಅನಂತ ಎಂದೇ ತಿಳಿಯಬೇಕು. ಪ್ರಸಿದ್ಧ ಉಪನಿಷತ್ತುಗಳ ಸಂಖ್ಯೆ ನೂರಾರು, ಅವುಗಳಲ್ಲಿ ಮುಖ್ಯವಾಗಿ ಹತ್ತು ಉಪನಿಷತ್ತುಗಳು ಸುಪ್ರಸಿದ್ಧ. ಇವುಗಳು ಋಗ್ವೇದ, ಯಜುರ್ವೇದ ಹಾಗೂ ಅಥರ್ವಣವೇದಗಳಿಗೆ ಸಂಬಂಧಿಸಿವೆ. ಐತರೇಯೋಪನಿಷತ್ತು ಋಗ್ವೇದಕ್ಕೆ ಸೇರಿದ ಉಪನಿಷತ್ತು. ಇತರ ಉಪನಿಷತ್ತುಗಳು ಉಳಿದ ಮೂರು ವೇದಗಳಿಗೆ ಸಂಬಂಧಿಸಿವೆ. ಈ ಹತ್ತೂ ಉಪನಿಷತ್ತುಗಳಿಗೂ ಶ್ರೀಮದಾಚಾರ್ಯರು ಭಾಷ್ಯಗಳನ್ನು ರಚಿಸಿರುವರು. ಇವುಗಳೊಂದಿಗೆ ಶ್ವೇತಾಶ್ವತರೋಪನಿಷತ್ತು ಸಹ ಬ್ರಹ್ಮಜಿಜ್ಞಾಸೆಗೆ ಉಪಯುಕ್ತವೆನ್ನಿಸಿದೆ. ಉಪನಿಷತ್ತುಗಳ ಹೆಸರಿನಲ್ಲಿ ಇತ್ತೀಚಿನವರು ತಮ್ಮ ದೇವತೆಗಳ ಹೆಸರಿನಲ್ಲೂ ಉಪನಿಷತ್ತುಗಳನ್ನು ರಚಿಸಿರುವುದುಂಟು. ಅವುಗಳು ನಿಜ ಅರ್ಥದಲ್ಲಿ ಉಪನಿಷತ್ತುಗಳು ಎನ್ನಿಸಲಾರವು.

೫. '**ವೇದಾಂಗಗಳು**' ಎಂದರೆ, ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ, ಜ್ಯೌತಿಷ ಹಾಗೂ ಕಲ್ಪ ಎಂಬುದಾಗಿ ಆರು ಎಂದು ತಿಳಿಯಬೇಕು; ಇವುಗಳಲ್ಲಿ ಕೂಡಾ ಮಹಾವ್ಯಾಕರಣ, ವ್ಯಾಸನಿರುಕ್ತ ಮೊದಲಾದ ಮೂಲ ಕೃತಿಗಳು ಮುಖ್ಯವಾಗಿ ವಿವಕ್ಷಿತ.

೬. '**ಪುರಾಣಗಳು**' ಐದನೆಯ ವೇದದಲ್ಲಿ ಪರಿಗಣಿತವಾದುವು. ಮಹಾಪುರಾಣ ಹಾಗೂ ಉಪಪುರಾಣ ಎಂಬುದಾಗಿ ಇವುಗಳಲ್ಲಿ ಎರಡು ವಿಧ. ಮಹಾಪುರಾಣಗಳ ಸಂಖ್ಯೆ ೧೮, ಆದರಂತೆ ಉಪಪುರಾಣಗಳು ಸಹ ೧೮. ಶ್ರೀಮದ್ಭಾಗವತ ಮೊದಲಾದವುಗಳು ಮಹಾಪುರಾಣಗಳು, ಮಹಾವಾರಾಹ, ಮಹಾಕೂರ್ಮ ಮೊದಲಾದವುಗಳು ಉಪಪುರಾಣಗಳು. ಈ ಎಲ್ಲ ಪುರಾಣಗಳು ಸಹ ಶ್ರೀವೇದವ್ಯಾಸದೇವರ ರಚನೆ. ವೇದಾರ್ಥನಿರ್ಣಯಕ್ಕೆ ಅತ್ಯಗತ್ಯವೆನ್ನಿಸುವ ಅಪೂರ್ವ ಸಾಹಿತ್ಯ ಪುರಾಣಸಾಹಿತ್ಯ. ಶ್ರೀಮನ್ಮಧ್ವಾಚಾರ್ಯರು ಇವುಗಳಲ್ಲಿ ಶ್ರೀಮದ್ಭಾಗವತ ಮಹಾಪುರಾಣಕ್ಕೆ ಶ್ರೀಮದ್ಭಾಗವತತಾತ್ಪರ್ಯನಿರ್ಣಯ ಎಂಬ

ಅಪೂರ್ವವಾದ ನಿರ್ಣಯಕೃತಿಯನ್ನು ರಚಿಸಿರುವರು. ಅದರ ಸರಿಯಾದ ಅಧ್ಯಯನವು ಇತರ ಸಕಲ ಪುರಾಣಗಳ ಮರ್ಮವನ್ನು ಸಹ ಯಥಾವತ್ತಾಗಿ ತಿಳಿಯಲು ನೆರವಾಗುವುದು. ಪುರಾಣದ ಅಧ್ಯಯನವಿಲ್ಲದವನು ನಿಜ ಅರ್ಥದಲ್ಲಿ ಪಂಡಿತ ಎನ್ನಿಸಲಾರ ಎಂಬುದು ಶಾಸ್ತ್ರಗಳ ಘೋಷಣೆ. ಈ ಮಾತಿನಲ್ಲಿ ಇವುಗಳ ಅಧ್ಯಯನದ ಮಹತ್ತ್ವ ಅಪೂರ್ವರೀತಿಯಲ್ಲಿ ನಿರೂಪಿತವಾಗಿದೆ ಎಂಬುದನ್ನು ಗಮನಿಸಬೇಕು.

೭. '**ವೇದಾಂತಾಃ**: ವೇದಾಂತ ಎಂದರೆ ಮುಖ್ಯವಾಗಿ ಬ್ರಹ್ಮಸೂತ್ರ ಎಂದರ್ಥ. ವೇದಾಂತ ಎಂಬುದಕ್ಕೆ ಉಪನಿಷತ್ತು ಎಂಬ ಅರ್ಥವಿದ್ದರೂ ಸಹ ಈಗಾಗಲೇ ಉಪನಿಷದ್ಗಣಾಃ ಎಂಬ ಮಾತಿನಲ್ಲಿ ಅವುಗಳ ಪ್ರಸ್ತಾಪ ಬಂದಿರುವುದರಿಂದ ಇಲ್ಲಿ ವೇದಾಂತ ಎಂಬುದಕ್ಕೆ ವೇದಾಂತ ಸೂತ್ರಗಳು, ಬ್ರಹ್ಮಮೀಮಾಂಸಾ ಶಾಸ್ತ್ರ ಎಂದೇ ಅರ್ಥ. ಇವು ಶಾರೀರಿಕ ಸೂತ್ರಗಳು ಎಂಬುದಾಗಿಯೂ ಪ್ರಸಿದ್ಧ. ಶ್ರೀವೇದವ್ಯಾಸರು ಸಕಲ ವೇದಾದಿ ಶಾಸ್ತ್ರಗಳ ನಿರ್ಣಯಕ್ಕೆಂದು ರಚಿಸಿದ ಅಪೂರ್ವ ಶಾಸ್ತ್ರ ಇದಾಗಿದೆ. ಇದರಲ್ಲಿ ಒಟ್ಟು ನಾಲ್ಕು ಅಧ್ಯಾಯಗಳು ಇದ್ದು ಒಂದೊಂದು ಅಧ್ಯಾಯದಲ್ಲೂ ನಾಲ್ಕು ಪಾದದಂತೆ ಒಟ್ಟು ಹದಿನಾರು ಪಾದಗಳು ಇರುವವು. ಒಟ್ಟು ಬ್ರಹ್ಮಸೂತ್ರಗಳ ಸಂಖ್ಯೆ ೫೬೪. ಅಧಿಕರಣಗಳ ಸಂಖ್ಯೆ ೨೨೨. ವೇದಗಳಿಗಿಂತಲೂ ಮಿಗಿಲಾದ ನಿರ್ಣಾಯಕ ಶಾಸ್ತ್ರ ಎಂಬುದು ಬ್ರಹ್ಮಸೂತ್ರಗಳ ಹಿರಿಮೆ. ಪರವಿದ್ಯೆ ಎಂಬ ಪದ ಮುಖ್ಯವಾಗಿ ಅನ್ವಯಿಸುವುದು ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೇ ಆಗಿದೆ. ಸಮನ್ವಯ, ಅವಿರೋಧ, ಸಾಧನ ಹಾಗೂ ಫಲ ಎಂಬುದಾಗಿ ಕ್ರಮವಾಗಿ ಇದರಲ್ಲಿನ ನಾಲ್ಕು ಅಧ್ಯಾಯಗಳ ಹೆಸರು. ವೇದಾಂತ ಎಂಬ ಪದದಿಂದ ದೈವೀಮೀಮಾಂಸಾ ಎನ್ನಿಸಿದ ಶೇಷಪೈಲರ ಕೃತಿ (ಇದರ ಆದ್ಯಂತಸೂತ್ರಗಳು ಮಾತ್ರ ಶ್ರೀವೇದವ್ಯಾಸರಿಂದಲೇ ರಚಿತ), ಕರ್ಮಮೀಮಾಂಸಾ ಎನ್ನಿಸಿದ ಜೈಮಿನೀ ಸೂತ್ರಗಳು ಸಹ ಉಪಲಕ್ಷಿತ. ಶ್ರೀಮದಾಚಾರ್ಯರ ಮೀಮಾಂಸಾ ತ್ರಿವಿಧಾ ಎಂಬ ಮಾತಿನಲ್ಲಿ ಈ ವಿಷಯ ಬಂದಿದೆ. ವೇದಕ್ಕೆ ಸಂಬಂಧಿಸಿರುವ ಕಾರಣದಿಂದ ಉಳಿದೆರಡು ಮೀಮಾಂಸೆಗಳು ಸಹ ವೇದಾಂತ ಎನ್ನಿಸುವವು. ಇಲ್ಲಿಯ ವೇದಾಂತಾಃ ಎಂಬುವ ಬಹುವಚನ ('ಬಹುವಚನಮಾದ್ಯರ್ಥೇ') ಈ ಅರ್ಥದಲ್ಲಿ ಉಚಿತ. ಇನ್ನೂ ಮುಖ್ಯವಾಗಿ ಶ್ರೀಜಯತೀರ್ಥರು ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ ತಿಳಿಸಿರುವಂತೆ ಇಡೀ ಬ್ರಹ್ಮಸೂತ್ರ ಮಾತ್ರವಲ್ಲದೇ ಅದರಲ್ಲಿನ ಪ್ರತಿಯೊಂದು ಸೂತ್ರವೂ ಸಹ ಪ್ರತ್ಯೇಕವಾಗಿ ಬ್ರಹ್ಮವಿದ್ಯೆ ಎಂಬುದಾಗಿ ಪರಿಗಣಿತವಾಗಿವೆ: '**ಸರ್ವಾಣಿ ಹಿ ಸೂತ್ರಾಣಿ ಪ್ರತ್ಯೇಕಂ ಅನೇಕವೇದವಾಕ್ಯವಿಚಾರಪರತ್ವಾತ್ ಅವಾಂತರಬ್ರಹ್ಮವಿದ್ಯಾಃ** । (ನ್ಯಾಯಸುಧಾ).

೮. **'ಮಂತ್ರಶಾಸ್ತ್ರ'** ಎಂಬುದು ವಾರಾಹಾದಿ ಮಂತ್ರಗಳ ಅಂಗನ್ಯಾಸ, ಕರನ್ಯಾಸ, ದೇವತಾ, ಋಷಿ, ಛಂದಸ್ಸು ಹಾಗೂ ಧ್ಯಾನಶ್ಲೋಕಗಳ ಜಪಕ್ರಮವನ್ನು ತಿಳಿಸುವ ಶಾಸ್ತ್ರ ಶ್ರೀಮದಾಚಾರ್ಯರ ತಂತ್ರಸಾರಸಂಗ್ರಹದ ಮಂತ್ರಾಧ್ಯಾಯ ಎಂಬ ಹೆಸರಿನ ನಾಲ್ಕನೇ ಅಧ್ಯಾಯವು ಇದಕ್ಕೆ ಉತ್ತಮ ನಿದರ್ಶನ: ಮನನಾತ್ ತ್ರಾಯತೇ ಇತಿ ಮಂತ್ರಃ ಎಂಬ ನಿರ್ವಚನದಿಂದ ಸತತ ಮನನದಿಂದ ರಕ್ಷಣೆ ಒದಗಿಸುವುದು ಮಂತ್ರವೆನ್ನಿಸುವುದು. ಲಕ್ಷ್ಮೀ ಮೊದಲಾದ ಇತರ ಸಕಲ ದೇವತೆಗಳ ಮಂತ್ರಗಳಿಗೂ ಓಂಕಾರವು ವಿಹಿತ. ಓಂಕಾರವು ಸದಾ ಪ್ರತಿಪಾದಿಸುವುದು ಮಹಾವಿಷ್ಣುವನ್ನು. ಆದ್ದರಿಂದ ವಿಷ್ಣುಮಂತ್ರಗಳು ಮಾತ್ರವಲ್ಲದೇ ರಮಾಬ್ರಹ್ಮಾದಿ ಇತರ ಸಕಲದೇವತೆಗಳ ಮಂತ್ರಗಳು ಸಹ ಮುಖ್ಯವಾಗಿ ವಿಷ್ಣುಪಾರಮ್ಯವನ್ನೇ ಪ್ರತಿಪಾದಿಸುವವು ಎಂಬುದು ವಿಶೇಷ.

೯. **'[1]ತಂತ್ರಶಾಸ್ತ್ರ'** ಎಂಬುದು ವೇದಾಂತದ ಪ್ರಾಯೋಗಿಕ ಭಾಗ ಎನ್ನಬಹುದು. ವಿಜ್ಞಾನಕ್ಕೆ ತಂತ್ರಜ್ಞಾನ ಹೇಗೋ ಹಾಗೆ. ಒಂದರ್ಥದಲ್ಲಿ ಇದನ್ನು ಅಪ್ಲೈಡ್ ಫಿಲಾಸಫಿ ಎನ್ನಬಹುದು. ತಂತ್ರಸಾರ ಎಂಬ ಹೆಸರಿನ ವಿಷ್ಣುಕೃತವಾದ ಕೃತಿ ತಂತ್ರಶಾಸ್ತ್ರದ ಆಕರಗ್ರಂಥ. ಅದನ್ನು ಆಧರಿಸಿ ರಚಿತವಾಗಿರುವ ಶ್ರೀಮನ್ಮಧ್ವಾಚಾರ್ಯರ ತಂತ್ರಸಾರಸಂಗ್ರಹ ಒಟ್ಟಾಗಿ ತಂತ್ರಶಾಸ್ತ್ರದ ಕೈಪಿಡಿಯಂತಹ ಅಪೂರ್ವ ಕೃತಿ.

೧೦. **ತರ್ಕಾಃ 'ತರ್ಕ'** ಎಂದರೆ ನ್ಯಾಯಶಾಸ್ತ್ರ; ಬ್ರಹ್ಮತರ್ಕ ಎಂಬುದು ಮೂಲ ತರ್ಕಶಾಸ್ತ್ರ ಉದಯನಾದಿಪ್ರಣೀತವಾದ ತರ್ಕಶಾಸ್ತ್ರವು ವೈದಿಕ ತರ್ಕಶಾಸ್ತ್ರಕ್ಕೆ ಸೇರಲಾರದು. ಶ್ರೀಹರಿಯ ನಾರಾಯಣರೂಪದಿಂದ ರಚಿತವಾದ ಬ್ರಹ್ಮತರ್ಕವು ಒಟ್ಟು ೫೦ಕೋಟಿ ಶ್ಲೋಕಾತ್ಮವಾಗಿದ್ದು ಅದರಲ್ಲಿನ ೫೦ಸಾವಿರ ಶ್ಲೋಕಗಳನ್ನು ಶ್ರೀವೇದವ್ಯಾಸರು ಆಯ್ದುಕೊಟ್ಟಿರುವರು ಎಂಬ ವಿಶೇಷ ಮಾಹಿತಿ ಅನುವ್ಯಾಖ್ಯಾನದಲ್ಲಿದೆ (೧/೧/೭೬,೭೭). ವೇದಾಂತ ಶಾಸ್ತ್ರಕ್ಕೆ ಅತ್ಯಂತ ಸಹಕಾರಿ ಎನ್ನಿಸುವ ಹಿರಿಮೆ ವೈದಿಕತರ್ಕ ಹಾಗೂ ವ್ಯಾಕರಣಗಳಿಗೆ ಇದೆ. ಇವೆರಡರ ಅಧ್ಯಯನವಿಲ್ಲದ ವೇದಾಂತದ ಅಧ್ಯಯನ ತಳಪಾಯವಿಲ್ಲದ ಕಟ್ಟಡದಂತೆ ಅಭದ್ರವೆನ್ನಿಸುವುದು. ಇಂದಿನ ಜನ ಅಧ್ಯಯನ ಮಾಡುವ ಉದಯನಾದಿ ಪ್ರಣೀತ ವೈದಿಕ ತರ್ಕಶಾಸ್ತ್ರದಲ್ಲಿ ಗೃಹೀತವಾಗಿಲ್ಲ. 'ತರ್ಕಾಃ' ಎಂಬಲ್ಲಿನ ಬಹುವಚನವು 'ಬಹುವಚನಮಾದ್ಯರ್ಥೇ' ಎಂಬ ನಿಯಮದಂತೆ ಬೃಹತ್ತರ್ಕ ಮೊದಲಾದ ಇತರ ತರ್ಕಗ್ರಂಥಗಳನ್ನು ಸೂಚಿಸುವುದು[2].

---

೧. 'ತತಃ ಪ್ರಕಾಶೋ ವಿಸ್ತಾರಸ್ತಂತ್ರಂ ಚೇತ್ಯಭಿಧೀಯತೇ' ಇತಿ ತಂತ್ರಮಾಲಾಯಾಮ್
– ಭಾಗವತತಾತ್ಪರ್ಯ (೩/೩೪/೫)

ತನುತೇ ಯೇನ ಕಾರ್ಯಂ ತತ್ ತಂತ್ರಂ ಸಾಧನಮುಚ್ಯತೇ।
ಕಾರಣಾನಾಂ ಸ್ವಶಕ್ತೇರ್ವಾ ಪ್ರಧಾನಂ ಸಾಧನಂ ಯತಃ॥ – ಭಾ.ತಾ. (೩/೭/೩)

೨. ಬೃಹತ್ತರ್ಕಾದಯಃ ಸರ್ವೇ ಅನುವ್ಯಾಖ್ಯಾಃ ಪ್ರಕೀರ್ತಿತಾಃ। – ಬೃಹದಾರಣ್ಯಕೋಪನಿಷದ್ಭಾಷ್ಯ

೧೧. '**ಸ್ಮೃತಿಗಳು**' ಎಂದರೆ ಅಪರೋಕ್ಷಜ್ಞಾನಿಗಳಾದ ಋಷಿಗಳ ರಚನೆ. ಅಂತಹ ಸ್ಮೃತಿಗಳು ಸಹ ಅನೇಕ. ಅವುಗಳಲ್ಲೂ ಸಾತ್ವಿಕಾದಿ ಪ್ರಬೇಧ ಉಂಟು. ಮನುಸ್ಮೃತಿಯು ಸ್ಮೃತಿರಾಜ ಎನ್ನಿಸಿರುವ ಅಪೂರ್ವಕೃತಿ. ಕಲಿಯುಗಕ್ಕೆ ಪರಾಶರ ಸ್ಮೃತಿ ವಿಹಿತ ಎಂಬ ಮಾತೂ ಇದೆ. ವ್ಯಾಸಸ್ಮೃತಿ, ಶಂಖಸ್ಮೃತಿ, ಲಿಖಿತಸ್ಮೃತಿ ಮೊದಲಾಗಿ ನೂರಾರು ಸ್ಮೃತಿಗಳು ಇಂದು ಉಪಲಬ್ಧವಿವೆ. ಶ್ರುತಿಗೆ ಅವಿರುದ್ಧವಾಗಿದ್ದಾಗ ಮಾತ್ರವೇ ಸ್ಮೃತಿಗಳಿಗೆ ಪ್ರಾಧಾನ್ಯ. ಶ್ರುತಿವಿರುದ್ಧವಾದ ಸ್ಮೃತಿಗಳು ಮಾತ್ರ ಅಗ್ರಾಹ್ಯವೇ ಸರಿ. ವೇದಾನುಕೂಲವೆಂಬ ಕಾರಣದಿಂದ ಸ್ಮೃತಿಗಳಿಗೆ ಪ್ರಾಮಾಣ್ಯ ವಿಹಿತವಾಗಿದೆ[೧]. ಸ್ಮೃತಿಃ ಶ್ರುತ್ಯನುಸಾರಿಣಿ ಎಂಬ ಮಾತಿನಲ್ಲೂ ವೇದಾನುಕೂಲ್ಯವಿದ್ದಾಗ ಸ್ಮೃತಿಗಳಿಗೆ ಪ್ರಾಮಾಣ್ಯ ಎಂಬ ವಿಚಾರ ಬಂದಿದೆ.

೧೨. '**ಕಾವ್ಯ**' ಎಂದರೆ ರೋಚಕವೆನ್ನಿಸುವ ವಾಕ್ಯ. ಧ್ವನಿ ಕಾವ್ಯದ ಜೀವಾಳ. ಈ ಕಾವ್ಯವು ಸಹ ಶ್ರವ್ಯ ಹಾಗೂ ದೃಶ್ಯ ಎಂಬುದಾಗಿ ಎರಡು ಬಗೆ. ಅದರಂತೆ ಪದ್ಯ ಹಾಗೂ ಗದ್ಯ ಎಂಬುದಾಗಿ ಮತ್ತೆ ಎರಡು ಬಗೆ. ಶ್ರವ್ಯಕಾವ್ಯವು ಮಹಾಕಾವ್ಯ ಹಾಗೂ ಖಂಡಕಾವ್ಯ ಎಂಬುದಾಗಿ ಎರಡು ಬಗೆ. 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂಬ ಮಾತಿನಲ್ಲಿ ಕಾವ್ಯಾದಿಗಳು ಉಪಾದೇಯವಲ್ಲ ಎಂಬ ವಿವರವಿದೆ. ಆದರೆ, ಅದು ವೈಷ್ಣವೇತರ ಕಾವ್ಯಗಳಿಗೆ ಅನ್ವಯಿಸುವ ಮಾತು ಎಂದು ತಿಳಿಯಬೇಕು. ಆದ್ದರಿಂದ ಮಧ್ವವಿಜಯ, ರುಗ್ಮಿಣೀಶವಿಜಯ ಮೊದಲಾದ ಹರಿಚರಿತ್ರೆ ಹಾಗೂ ಗುರುಚರಿತ್ರೆಗಳನ್ನು ತಿಳಿಸುವ ಕಾವ್ಯಗಳು ಉಪಾದೇಯ ಎಂದು ತಿಳಿಯಬೇಕು.

೧೩. '**ಅಲಂಕಾರಶಾಸ್ತ್ರ**' ಎಂಬುದು ಸಾಹಿತ್ಯಶಾಸ್ತ್ರ ಸಾಹಿತ್ಯದ ಸಮಗ್ರ ಅಧ್ಯಯನಕ್ಕೆ ಇದು ಅತ್ಯಗತ್ಯ. ಶಬ್ದಾಲಂಕಾರ, ಅರ್ಥಾಲಂಕಾರ ಎಂಬ ಅಲಂಕಾರಗಳ ಬಗೆಗಿನ ಮಾಹಿತಿಯು ಇದರಿಂದ ಲಭ್ಯ; ಇಲ್ಲಿಯೂ ಸಹ ವೈಷ್ಣವ ಪರಂಪರೆಯ ರಘುನಾಥವಿಜಯ, ಸತ್ಯಸಂಧಾಲಂಕಾರ ಮೊದಲಾದ ಅಲಂಕಾರಗ್ರಂಥಗಳು ಗ್ರಾಹ್ಯ ಎಂದರ್ಥ.

೧೪. '**ನೀತಿಶಾಸ್ತ್ರ**' ಎಂಬುದು ಮುಖ್ಯವಾಗಿ ರಾಜನೀತಿಶಾಸ್ತ್ರಕ್ಕೆ ಅನ್ವಯಿಸುವ ಪದ. ರಾಜನೀತಿ ಎಂದರೆ ರಾಜ್ಯಶಾಸ್ತ್ರ ಚಾಣಕ್ಯನ ಅರ್ಥಶಾಸ್ತ್ರ ಅರ್ವಾಚೀನ ನೀತಿಶಾಸ್ತ್ರಕ್ಕೆ ಉದಾಹರಣೆ. ಪ್ರಾಚೀನವಾದ ರಾಜನೀತಿ ಎಂಬ ಕೃತಿಯ ಉಲ್ಲೇಖ ಸರ್ವಮೂಲಗ್ರಂಥಗಳಲ್ಲಿ ಕಾಣಬಹುದು. ನೀತಿ ಎಂಬುದಕ್ಕೆ ಲೋಕನೀತಿ ಎಂಬ ಅರ್ಥವೂ ಇದೆ. ಜೀವನಕ್ಕೆ ಬಗೆಬಗೆಯಲ್ಲಿ ನೆರವಾಗುವ ಸೂಕ್ತಿಗಳು ಸಹ ನೀತಿ ಎಂಬ ಹೆಸರಿನಿಂದ ಪ್ರಸಿದ್ಧ. ಮುಖ್ಯವಾಗಿ ಬೃಹಸ್ಪತಿ ನೀತಿ ಎಂಬ ದೇವನೀತಿ ಇಲ್ಲಿ ವಿವಕ್ಷಿತ.

೧. ಪ್ರಮಾಣಾನ್ಯೇವ ಮನ್ವಾದ್ಯಾಃ ಸ್ಮೃತಯೋಽಪ್ಯನುಕೂಲತಃ । – ಮ.ಭಾ.ತಾ.ನಿ (೧/೩೨)

ಶ್ರೀಮನ್ಮಹಾಭಾರತ ಉದ್ಯೋಗಪರ್ವದಲ್ಲಿನ ವಿದುರ ನೀತಿಯು ಅತ್ಯಂತ ಗ್ರಾಹ್ಯ. ಅಸುರ ನೀತಿಯನ್ನು ವಿವರಿಸುವ ಶುಕ್ರನೀತಿ ಅಸುರಾದಿಗಳ ನಿಗ್ರಹಕ್ಕೆ ಅಗತ್ಯವಾದ್ದರಿಂದ ಪೂರ್ವಪಕ್ಷವಾಗಿ ಗ್ರಾಹ್ಯ. ಶ್ರೀಮನ್ಮಹಾಭಾರತದ ಆದಿಪರ್ವದಲ್ಲಿನ ಕಣಿಕ ನೀತಿ ಈ ಶುಕ್ರನೀತಿಯ ಸಾರದಂತಿದೆ.

೧೫. '**ನಾಟಕಗಳು**' ಎಂದರೆ, ದೃಶ್ಯಕಾವ್ಯಗಳು ಎಂದರ್ಥ. ಭಗವಂತನ ಹಿರಿಮೆ-ಯನ್ನು ಸಾರುವಂತಹ, ಗುರುಗಳ ಮಹಿಮೆಯನ್ನು ಸಾದರಪಡಿಸುವಂತಹ ಶಾಸ್ತ್ರಸಮ್ಮತವಾದ ನಾಟಕಗಳು ಎಂದು ತಿಳಿಯಬೇಕು. ವೈಷ್ಣವ ನಾಟಕಗಳಾದ ಸುಭದ್ರಾ-ಧನಂಜಯ, ಸುಭದ್ರಾಹರಣ, ಪ್ರಚಂಡರಾಹೂದಯ, ಪದ್ಮಾವತಿ ಪರಿಣಯ ಮೊದಲಾದಂತಹ ನಾಟಕಗಳು ಇಲ್ಲಿ ವಿವಕ್ಷಿತ.

೧೬. '**ಶಬ್ದಗಳು**' ಎಂಬುದಕ್ಕೆ ಶಾಸ್ತ್ರ ಎಂದೇ ಅರ್ಥ. ಇನ್ನು ಪ್ರತ್ಯೇಕವಾಗಿ ಶಬ್ದಗಳು ಎಂಬ ಅರ್ಥವನ್ನೂ ತಿಳಿಯಬಹುದು. ಅಂತಹ ಶಬ್ದಗಳು ಲೌಕಿಕವೈದಿಕ ಮೊದಲಾಗಿ ಅನೇಕ ವಿಧ. ವರ್ಣಗಳಂತೆ ಧ್ವನಿಗಳು ಸಹ ಶಬ್ದಗಳು ಎಂಬ ವಿಶೇಷಾಂಶವನ್ನು ಶ್ರೀಮದಾಚಾರ್ಯರು ಸಾಧಾರವಾಗಿ ನಿರೂಪಿಸಿರುವರು.

೧೭. '**ನಾನಾವಿಧಾಃ**' ನಾನಾಬಗೆಯ ಶಬ್ದಗಳು ಎಂಬುದಕ್ಕೆ ಬ್ರಹ್ಮಸೂತ್ರಭಾಷ್ಯದ ಹಿನ್ನೆಲೆಯಲ್ಲಿ ತತ್ರಪ್ರಸಿದ್ಧ ಉಭಯತ್ರಪ್ರಸಿದ್ಧ ಅನ್ಯತ್ರಪ್ರಸಿದ್ಧ ಅನ್ಯತ್ರೈವಪ್ರಸಿದ್ಧ ನಾಮಾತ್ಮಕ, ಲಿಂಗಾತ್ಮಕ ಮೊದಲಾದ ಅನೇಕ ಅರ್ಥವನ್ನು ತಿಳಿಯಬಹುದು. ಲೌಕಿಕ, ವೈದಿಕ, ವರ್ಣಾತ್ಮಕ, ಧ್ವನ್ಯಾತ್ಮಕ ಮೊದಲಾದ ಮತ್ತೊಂದು ರೀತಿಯ ವಿಭಾಗವು ಇದಕ್ಕೆ ಅನ್ವಯಿಸುವುದು[೧]. ಶ್ರೀರಾಘವೇಂದ್ರಸ್ವಾಮಿಗಳ ಪ್ರಾತಃಸಂಕಲ್ಪಗದ್ಯದಲ್ಲಿ ಬಂದಿರುವಂತೆ ಲೌಕಿಕ ವೈದಿಕ ಎಂಬ ನಾನಾಶಬ್ದಗಳು ಎಂದು ತಿಳಿಯಬೇಕು.

೧೮. ಈ ಎಲ್ಲ ಶಾಸ್ತ್ರದ ಒಟ್ಟು ಮಹಾತಾತ್ಪರ್ಯ ಪರದೇವತೆಯಾದ ಮಹಾವಿಷ್ಣುವಿನ ಸರ್ವೋತ್ತಮತ್ವವೇ ಆಗಿದೆ. ಅವುಗಳ ಉದ್ದೇಶ ಆ ಭಗವಂತನ ಗುಣಗಾನವೇ ಆಗಿದೆ. ಅಂತಹ ಶ್ರೀಹರಿಯ ಗುಣಗಳು ಅನಂತ ಎಂಬುದನ್ನು ಗುಣರಾಶಿ ಎಂಬ ಪದ ಸೂಚಿಸುವುದು. ಕೀರ್ತನಪರಾಃ ಎಂಬುದಕ್ಕೆ ಗುಣವರ್ಣನ ರೂಪ ಎಂಬ ಅರ್ಥದಂತೆ ದೋಷಾಭಾವ ವರ್ಣನರೂಪ ಎಂಬ ಅರ್ಥವೂ ವಿವಕ್ಷಿತ; **ಸರ್ವೇ ವೇದಾಯ ಪದಮಾಮನಂತೀ** (ಕಠೋಪನಿಷತ್ತು); **ವೇದೈಶ್ಚ ಸರ್ವೈರಹಮೇವ ವೇದ್ಯಃ**

---

೧. ಸರ್ವೈಶ್ಚ ವೈದಿಕಪದ್ಯೈರಪಿ ಲೋಕಶಬ್ದೈ-
ರ್ಮೇಘಾಗ್ನಿವಾರಿಧಿತಲಾದಿರವೈಶ್ಚ ಸರ್ವೈಃ।
ಮುಖ್ಯಾಭಿಧೇಯಪರಿಪೂರ್ಣಗುಣಃ ಪ್ರಿಯೋಽಲಂ
ನಾರಾಯಣೋ ಮಮ ಸದೈವ ಸುತುಷ್ಟಿಮೇತು ॥ – ಐತರೇಯಭಾಷ್ಯ

(ಗೀತಾ); **ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ । ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥** (ಪುರಾಣವಾಕ್ಯ); **ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ । ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥** (ಹರಿವಂಶ ೭/೧೩೧); **ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ । ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥** (ಮ.ಭಾ.ತಾ.ನಿ ೨/೭೨).

೧೯. ದೇವತೆಗಳು ಮೊದಲಾದವರಿಂದ ಮಂಗಲಾಶಂಸನೆಯು ಹೇಗೋ ಹಾಗೆ ಶಾಸ್ತ್ರಗ್ರಂಥಗಳ ಅಭಿಮಾನಿದೇವತೆಗಳ ಅನುಗ್ರಹದ ಆಶಂಸನೆಯು ನಿಜವಾದ ಮಂಗಲಪ್ರಾಪ್ತಿಗೆ ಅಗತ್ಯ ಎಂಬುದು ಇಲ್ಲಿಯ ಮುಖ್ಯ ಸಂದೇಶ.

೨೦. ಇದರಲ್ಲಿನ ಕೊನೆಯ ಪಾದಕ್ಕೆ 'ಶ್ರೀವಿಷ್ಣೋರ್ಗುಣನಾಮಕೀರ್ತನಪರಾಃ' ಎಂಬ ಪಾಠಾಂತರವಿದ್ದು ಅದರಿಂದ ಸಕಲಸಚ್ಛಾಸ್ತ್ರಗಳು ಸಹ ಶ್ರೀವಿಷ್ಣುವಿನ ನಾಮಗಳಾಗಿವೆ²; ಹಾಗೂ ಅವನ ಮಹಿಮೆಯ ಕೀರ್ತನೆಯ ರೂಪವೇ ಆಗಿವೆ ಎಂದೂ ಅರ್ಥ.

೨೧. ಇಲ್ಲಿಯೂ ಸಹ ವೇದಗಳು ಮೊದಲಾದವುಗಳಿಗೆ ಅವುಗಳ ಅಭಿಮಾನಿ ದೇವತೆಗಳು ಎಂಬ ಅರ್ಥ ವಿವಕ್ಷಿತ. ಋಗ್ವೇದ ಮೊದಲಾದವುಗಳಿಗೆ ವಾಯುದೇವರು ಮೊದಲಾದವರು ಅಭಿಮಾನಿದೇವತೆಗಳು ಎಂಬುದು ಪ್ರಸಿದ್ಧವೇ ಆಗಿದೆ.

೨೨. ಪ್ರತಿಯೊಂದು ವರ್ಣಾತ್ಮಕ ಶಬ್ದವೂ ಸಹ ಅಕಾರಾದಿ ವರ್ಣಘಟಿತವಾಗಿದ್ದು ಆ ವರ್ಣಗಳಿಂದ ಕ್ರಮವಾಗಿ ಅಜ, ಆನಂದ ಮೊದಲಾದ ಭಗವದ್ರೂಪಗಳು ಪ್ರತಿಪಾದ್ಯವಾಗಿವೆ. ಈ ಅರ್ಥದಲ್ಲಿ ಸಕಲ ಶಬ್ದಗಳು ಭಗವದ್ವಾಚಕ ಎಂಬ ಮಾತು ಅತ್ಯಂತ ಸಮಂಜಸ ಎಂದಾಗುವುದು.

೨೩. ವಿಷ್ಣುವಿನ ನಾಮ ಇಲ್ಲದ ಶಬ್ದವೇ ಇಲ್ಲ¹; ಸಮಸ್ತ ಶಾಸ್ತ್ರಗಳು ಇರುವುದೇ ವಿಷ್ಣುವಿನ ಮಾಹಾತ್ಮ್ಯವನ್ನು ತಿಳಿಸಿ ಅವನಲ್ಲಿ ಭಕ್ತಿಯನ್ನು ಹುಟ್ಟಿಸಲೆಂದು²; ಪರಮಮುಖ್ಯ ವೃತ್ತಿಯಿಂದ ಸಮಸ್ತ ಶಬ್ದಪ್ರಪಂಚವು ಸಾರುವುದು ಶ್ರೀಹರಿಯ ಸರ್ವೋತ್ತಮತ್ವವನ್ನೇ; ವೇದಗಳಿಗೆ ಅತೀ ಕಡಿಮೆ ಎಂದರೂ ಮೂರು ಅರ್ಥ. ಮಹಾಭಾರತಕ್ಕೆ ಹತ್ತು ಅರ್ಥಗಳು; ವಿಷ್ಣುಸಹಸ್ರನಾಮದ ಪ್ರತಿನಾಮಕ್ಕೂ ನೂರು ಅರ್ಥಗಳು ಎಂದ ವಿಶೇಷ ಪ್ರಮೇಯವನ್ನು ಸಾರಿ ಸಾರಿ ಹೇಳಿದ ಮಹಾಚಾರ್ಯರು ಶ್ರೀಮನ್ಮಧ್ವಾಚಾರ್ಯರು.

*****

---

೧. ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥ – ಸ್ಮೃತಿ

೨. ವಿಷ್ಣುಭಕ್ತಿವಿಧಾನಾರ್ಥಂ ಸರ್ವಂ ಶಾಸ್ತ್ರಂ ಪ್ರವರ್ತತೇ । – ಗೀತಾತಾತ್ಪರ್ಯನಿರ್ಣಯ

## - ೮ -

## ಗ್ರಹಾದಿ ಸಕಲವೂ ಮಂಗಳಕರ

**ಆದಿತ್ಯಾದಿನವಗ್ರಹಾಃ ಶುಭಕರಾ ಮೇಷಾದಯೋ ರಾಶಯೋ**
**ನಕ್ಷತ್ರಾಣಿ ಸಯೋಗಕಾಶ್ಚ ತಿಥಯಸ್ತದ್ದೇವತಾಸ್ತದ್ಗಣಾಃ।**
**ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ[೧]**
**ಸರ್ವೇ ಸ್ಥಾವರಜಂಗಮಾಃ ಪ್ರತಿದಿನಂ ಕುರ್ವಂತು ನೋ ಮಂಗಲಮ್ ॥**

ಪದಚ್ಛೇದ : ಆದಿತ್ಯಾದಿನವಗ್ರಹಾಃ, ಶುಭಕರಾಃ, ಮೇಷಾದಯಃ, ರಾಶಯಃ, ನಕ್ಷತ್ರಾಣಿ, ಸಯೋಗಕಾಃ, ಚ, ತಿಥಯಃ, ತದ್ದೇವತಾಃ, ತದ್ಗಣಾಃ, ಮಾಸಾಬ್ದಾಃ, ಋತವಃ, ತಥಾ, ಏವ, ದಿವಸಾಃ, ಸಂಧ್ಯಾಃ, ತಥಾ, ರಾತ್ರಯಃ, ಸರ್ವೇ, ಸ್ಥಾವರಜಂಗಮಾಃ, ಪ್ರತಿದಿನಂ, ಕುರ್ವಂತು, ನಃ, ಮಂಗಲಮ್.

**ಅನುವಾದ: ಮಂಗಳಕರವಾದ ಸೂರ್ಯ ಮೊದಲಾದ ನವಗ್ರಹಗಳು, ಮೇಷಮೊದಲಾದರಾಶಿಗಳು, ನಕ್ಷತ್ರಗಳು, ಯೋಗಗಳು, ತಿಥಿಗಳುಅವುಗಳ ದೇವತೆಗಳು ಹಾಗೂ ಗಣಗಳು, ತಿಂಗಳುಗಳು, ಸಂವತ್ಸರಗಳು, ಋತುಗಳು, ದಿವಸಗಳು, ಸಂಧ್ಯೆಗಳು, ರಾತ್ರಿಗಳು ಮತ್ತು ಸಕಲ ಸ್ಥಾವರ-ಜಂಗಮಗಳು ಪ್ರತಿದಿನದಲ್ಲೂ ನಮಗೆ ಮಂಗಳವನ್ನುಂಟು ಮಾಡಲಿ.**

ವಿ. ೧: ಈ ಶ್ಲೋಕದಲ್ಲಿ ನವಗ್ರಹ ಮೊದಲಾಗಿ ಸಕಲ ಸ್ಥಾವರ-ಜಂಗಮಗಳು ಮಂಗಳವನ್ನು ನೀಡಲಿ ಎಂಬ ಪ್ರಾರ್ಥನೆ ಬಂದಿದೆ; ಜಡಗಳು ಎಂದರೆ ವೃಕ್ಷಾದಿ ಸ್ಥಾವರ ಜೀವರು ಎಂದೂ, ಜಂಗಮ ಚೇತನಗಳು ಎಂದರೆ ನಡೆದಾಡುವ ಪ್ರಾಣಿಜೀವರು

---

೧. ಹಗಲು, ರಾತ್ರಿ ಮೊದಲಾದವುಗಳು ಸಹ ಸ್ಮರಣೆಯು ಸಹ ಪಾಪಪರಿಹಾರಕವು, ಪುಣ್ಯಪ್ರದಾಯಕವು ಆಗಿದ್ದು, ಅವುಗಳ ಸ್ಮರಣೆ ವಿಹಿತ ಎಂಬ ವಿವರ ಮಹಾಭಾರತದಲ್ಲಿದೆ:
ಶರ್ವಯೋರ್ ದಿವಸಾಶ್ಚೈವ ಮಾರೀಚಃ ಕಶ್ಯಪಸ್ತಥಾ।
ಶುಕ್ರೋ ಬೃಹಸ್ಪತಿರ್ಭೌಮೋ ಬುಧೋ ರಾಹುಃ ಶನೈಶ್ಚರಃ॥
ನಕ್ಷತ್ರಾಣ್ಯೃತವಶ್ಚೈವ ಮಾಸಾಃ ಪಕ್ಷಾಃ ಸವತ್ಸರಾಃ। - ಮಹಾಭಾರತ (ಅ.ಪ/೧೬೫/೧೭)
ವಿಶ್ವೇದೇವಾ ನಭಶ್ಚೈವ ನಕ್ಷತ್ರಾಣಿ ಗ್ರಹಾಸ್ತಥಾ।
ಪಾಂತು ನಃ ಸತತಂ ದೇವಾಃ ಕೀರ್ತಿತಾಽಕೀರ್ತಿತಾ ಮಯಾ॥
ಕೀರ್ತಯಾನೋ ನರೋ ಹ್ಯೇತಾನ್ ಮುಚ್ಯತೇ ಸರ್ವಕಿಲ್ಬಿಷೈಃ।
ಸ್ತುವಂಶ್ಚ ಪ್ರತಿನಂದಂಶ್ಚ ಮುಚ್ಯತೇ ಸರ್ವತೋ ಭಯಾತ್॥
ಸರ್ವಸಂಕರಪಾಪೇಭ್ಯೋ ದೇವತಾಸ್ತವನಂದಕಃ।
ದೇವತಾನಂತರಂ ವಿಪ್ರಾಂಸ್ತಪಃಸಿದ್ಧಾಂಸ್ತಪೋಽಧಿಕಾನ್॥ - ಮಹಾಭಾರತ (ಅ.ಪ/೧೬೫/೩೪-೩೬)

ಎಂದೂ ಅರ್ಥ. ಆ ಜೀವರು ಎಂದರು ಸಹ ಆ ಜೀವಗಳಲ್ಲಿ ನೆಲೆಸಿರುವ ಭಗವದ್ರೂಪಗಳು ಎಂದೇ ಮುಖ್ಯಾರ್ಥ.

೨. 'ಆದಿತ್ಯ' ಮೊದಲಾದ ನವಗ್ರಹಗಳು: **ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು** ಹಾಗೂ **ಕೇತು**. ಈ ಗ್ರಹಗಳು ಹಾಗೂ ಇವುಗಳ ದೇವತೆಗಳು ಎಂದರೆ, ಸೂರ್ಯ, ಚಂದ್ರ ಮೊದಲಾದ ದೇವತೆಗಳು ಎಂದರ್ಥ. ಶನೈಶ್ಚರ ಹಾನಿಕಾರಕ ಎಂದು ಪ್ರಸಿದ್ಧನಾಗಿದ್ದರೂ ಅವನು ಸಾತ್ವಿಕ ದೇವತೆ, ಅವನು ಕೆಡಕು ಮಾಡುವುದು ಹರಿಭಕ್ತರಲ್ಲದ ಅಯೋಗ್ಯ ಜನತೆಗೆ ಹೊರತು ಯೋಗ್ಯ ಜನತೆಗಲ್ಲ ಎಂಬ ಸೂಕ್ಷ್ಮವನ್ನು ಗಮನಿಸಬೇಕು. ಇನ್ನು ರಾಹು-ಕೇತುಗಳು. ಅವು ಮೂಲತಃ ಪಾಪಗ್ರಹಗಳೇ. ಎಂದರೆ ದೈತ್ಯರೇ ಸರಿ. ಆದರೆ ನವಗ್ರಹಗಳಲ್ಲಿ ಅವಕ್ಕೆ ಸ್ಥಾನ ದೊರಕಲು ಅವುಗಳಲ್ಲಿನ ದೇವತೆಗಳ ಆವೇಶವೇ ಕಾರಣ. ಸಾತ್ವಿಕರು ಈ ಅನುಸಂಧಾನವನ್ನು ಹೊಂದಿಯೇ ನವಗ್ರಹಪೂಜೆಯನ್ನು ಮಾಡಬೇಕು. ಇಲ್ಲವಾದಲ್ಲಿ ಅವರು ಸಲ್ಲಿಸುವ ಪೂಜೆ ಅಸುರರಾದ ರಾಹು-ಕೇತುಗಳಿಗೆ ಸೇರಿ ಅವರು ಅದರಿಂದ ಪುಷ್ಟಿಯನ್ನು ಪಡೆದು ಲೋಕಕ್ಕೆ ಹೆಚ್ಚಿನ ಕೆಡುಕನ್ನು ಉಂಟುಮಾಡುವಂತಾಗುವುದು. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಶ್ರೀಮನ್ಮಧ್ವಾಚಾರ್ಯರ ಮಹಾಭಾರತತಾತ್ಪರ್ಯನಿರ್ಣಯ ಹಾಗೂ ಅವುಗಳ ಭಾವಪ್ರಕಾಶಿಕೆ ಮೊದಲಾದ ಟೀಕೆಗಳ ಮೂಲಕ ತಿಳಿದುಕೊಳ್ಳಬೇಕು.

೩. ಆದಿತ್ಯಾದಿ ನವಗ್ರಹಗಳು ನೀಡುವ ಮಂಗಲದ ವಿವರ ಶ್ರೀವಾದಿರಾಜಸ್ವಾಮಿಗಳು ಮೊದಲಾದವರು ರಚಿಸಿರುವ ನವಗ್ರಹಸ್ತೋತ್ರಗಳಲ್ಲಿ ಬಂದಿದೆ.

---

೧. ಭಾಸ್ವಾನ್ ಮೇ ಭಾಸಯೇತ್ ತತ್ತ್ವಂ ಚಂದ್ರಶ್ಚಾಹ್ಲಾದಕೃದ್ಭವೇತ್ ।
ಮಂಗಲೋ ಮಂಗಲಂ ದದ್ಯಾದ್ಬುಧಶ್ಚ ಬುಧತಾಂ ದಿಶೇತ್ ॥
ಗುರುರ್ಮೇ ಗುರುತಾಂ ದದ್ಯಾತ್ ಕವಿಶ್ಚ ಕವಿತಾಂ ದಿಶೇತ್ ।
ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇಽರ್ಪಯೇತ್ ॥
ರಾಹುರ್ಮೇ ರಾಹಯೇದ್ರೋಗಂ ಗ್ರಹಾಃ ಸಂತು ಕರಗ್ರಹಾಃ ।
ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥
ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ ।
ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥ – ಶ್ರೀವಾದಿರಾಜರ ನವಗ್ರಹಸ್ತೋತ್ರ
ಶನೇ ದಿನಮಣೇಃ ಸೂನೋ ಹ್ಯನೇಕಗುಣಸನ್ಮಣೇ ।
ಅರಿಷ್ಟಂ ಹರ ಮೇಽಭೀಷ್ಟಂ ಕುರು ಮಾ ಕುರು ಸಂಕಟಮ್ ॥ – ಶ್ರೀವಾದಿರಾಜರ ಶನಿಸ್ತೋತ್ರ
ಸೂರ್ಯಃ ಶೌರ್ಯಮಥೇಂದುರಿಂದ್ರಪದವೀಂ ಸನ್ಮಂಗಲಂ ಮಂಗಲಃ
ಸದ್ಬುದ್ಧಿಂ ಚ ಬುಧೋ ಗುರುಶ್ಚ ಗುರುತಾಂ ಶುಕ್ರಃ ಶುಭಂ ಶಂ ಶನಿಃ ।
ರಾಹುರ್ಬಾಹುಬಲಂ ಕರೋತು ವಿಜಯಂ ಕೇತುಃ ಕುಲಸ್ಯೋನ್ನತಿಂ
ನಿತ್ಯಂ ಭೂತಿಕರಾ ಭವಂತು ಭವತಾಂ ಸರ್ವೇಽನುಕೂಲಾ ಗ್ರಹಾಃ ॥ – ಶ್ರೀಸತ್ಯಧರ್ಮತೀರ್ಥರು

೪. ಸೂರ್ಯ-ತತ್ತ್ವಪ್ರಕಾಶ; ಚಂದ್ರ-ಆಹ್ಲಾದಕರ; ಮಂಗಲ-ಮಂಗಲ; ಬುಧ-ಜ್ಞಾನ; ಗುರು-ಗೌರವ; ಶುಕ್ರ-ಕವಿತ್ವ; ಶನಿ-ಆನಂದಪ್ರಾಪ್ತಿ; ಕೇತು-ಜಯಪತಾಕೆ; ರಾಹು-ರೋಗಪರಿಹಾರ.

೫. 'ಶುಭಕರಾಃ' ಗ್ರಹಗಳಲ್ಲಿ ಶನಿ, ರಾಹುಗಳು ಅಶುಭ ಗ್ರಹಗಳು ಎಂಬ ಭಾವನೆ ಇದೆ. ಆದರೆ, ಹರಿಭಕ್ತರಿಗೆ ಸಕಲ ಗ್ರಹಗಳು ಸಹ ಶುಭಕರಗಳೇ ಹೊರತು, ಅಶುಭಕರಗಳಲ್ಲ ಎಂಬ ವಿಶೇಷವನ್ನು ಶುಭಕರಃ ಎಂಬ ಪದದಿಂದ ಸೂಚಿಸಿರುವರು.

೬. ಹರಿಕಥಾಮೃತಸಾರದಲ್ಲಿ ಶನೈಶ್ಚರನು ಹರಿಗುರುಗಳನ್ನು ಆರಾಧಿಸದ ಅವೈಷ್ಣವರಿಗೆ ಮಾತ್ರವೇ ಅಶುಭಕರ, ವೈಷ್ಣವರಿಗೆ ಶುಭಕರನೇ ಆಗಿರುವನು ಎಂಬ ವಿಷಯ ಸ್ಪಷ್ಟವಾಗಿ ನಿರೂಪಿತವಾಗಿದೆ:

ಹರಿಗುರುಗಳರ್ಚಿಸದ ಪಾಪಾತ್ಮರನ ಶಿಕ್ಷಿಸಲೋಸುಗ ಶನೈ-
ಶ್ಚರನೆನಿಸಿ ದುಷ್ಫಲಗಳೀವೆ ನಿರಂತರವು ಬಿಡದೆ।
ತರಣಿನಂದನ ನಿನ್ನ ಪಾದಾಂಬುರುಹಗಳಿಗಾನಮಿಪೆ ಬಹುದು-
ಸ್ತರಭವಾರ್ಣವಮಗ್ನನಾದೆನ್ನುದ್ಧರಿಸಬೇಕು ॥

೭. ರಾಹುವು ಮೂಲತಃ ಅಸುರ; ಆದರೆ, ಅವನಿಗೆ ಗ್ರಹತ್ವ ಒದಗಿದ್ದು ಅವನೊಳಗೆ ದೇವತೆಗಳು ಆವೇಶ ಮಾಡಿದ್ದರಿಂದ. ದೇವತೆಗಳು ವೈಷ್ಣವರಿಗೆ ಸದಾ ಶುಭಕರರೇ ಆದವರು. ಆದ್ದರಿಂದ ರಾಹು ಸಹ ಅಶುಭಕರನಲ್ಲ, ಅವೈಷ್ಣವರಿಗೆ ಮಾತ್ರವೇ ಅವನು ಅಶುಭಕರ ಎಂಬುದು ವಿಶೇಷಾಂಶ[೧].

೮. ಹೀಗೆ ಗ್ರಹಗಳ ಬಗೆಗಿನ ವಾಸ್ತವಾಂಶವನ್ನು ಅನಾವರಣಗೊಳಿಸಿರುವುದು ಈ ಪದ್ಯದಲ್ಲಿನ ವಿಶೇಷತೆ.

೯. ಸಂವತ್ಸರಾದಿಗಳ ವಿವರ ಹೀಗಿದೆ:

### ೧. ಸಂವತ್ಸರಗಳು (೬೦)

| | | | |
|---|---|---|---|
| ೦೧. ಪ್ರಭವ | ೦೨. ವಿಭವ | ೦೩. ಶುಕ್ಲ | ೦೪. ಪ್ರಮೋದ |
| ೦೫. ಪ್ರಜಾಪತಿ | ೦೬. ಅಂಗಿರಸ್ | ೦೭. ಶ್ರೀಮುಖ | ೦೮. ಭಾವ |
| ೦೯. ಯುವ | ೧೦. ಧಾತೃ | ೧೧. ಈಶ್ವರ | ೧೨. ಬಹುಧಾನ್ಯ |
| ೧೩. ಪ್ರಮಾಥೀ | ೧೪. ವಿಕ್ರಮ | ೧೫. ವೃಷ | ೧೬. ಚಿತ್ರಭಾನು |
| ೧೭. ಸ್ವಭಾನು | ೧೮. ತಾರಣ | ೧೯. ಪಾರ್ಥಿವ | ೨೦. (ಅ)ವ್ಯಯ |

೧. ಶಿರಸ್ತು ತಸ್ಯ ಗ್ರಹತಾಮವಾಪ ಸುರೈಃ ಸಮಾವಿಷ್ಟಮ್।....... - (ಮ.ಭಾ.ತಾ.ನಿ ೧೦/೩೧)

| | | | |
|---|---|---|---|
| ೨೧. ಸರ್ವಜಿತ್ | ೨೨. ಸರ್ವಧಾರೀ | ೨೩. ವಿರೋಧೀ | ೨೪. ವಿಕೃತಿ |
| ೨೫. ಖರ | ೨೬. ನಂದನ | ೨೭. ವಿಜಯ | ೨೮. ಜಯ |
| ೨೯. ಮನ್ಮಥ | ೩೦. ದುರ್ಮುಖ | ೩೧. ಹೇಮಲಂಬೀ | ೩೨. ವಿಳಂಬೀ |
| ೩೩. ವಿಕಾರೀ | ೩೪. ಶಾರ್ವರೀ | ೩೫. ಪ್ಲವ | ೩೬. ಶುಭಕೃತ್ |
| ೩೭. ಶೋಭನಕೃತ್ | ೩೮. ಕ್ರೋಧೀ | ೩೯. ವಿಶ್ವಾವಸು | ೪೦. ಪರಾಭವ |
| ೪೧. ಪ್ಲವಂಗ | ೪೨. ಕೀಲಕ | ೪೩. ಸೌಮ್ಯ | ೪೪. ಸಾಧಾರಣ |
| ೪೫. ವಿರೋಧಿಕೃತ್ | ೪೬. ಪರಿಧಾವೀ | ೪೭. ಪ್ರಮಾದೀ | ೪೮. ಆನಂದ |
| ೪೯. ರಾಕ್ಷಸ | ೫೦. ನಲ | ೫೧. ಪಿಂಗಲ | ೫೨. ಕಾಳಯುಕ್ತ |
| ೫೩. ಸಿದ್ಧಾರ್ಥೀ | ೫೪. ರೌದ್ರ | ೫೫. ದುರ್ಮತಿ | ೫೬. ದುಂದುಭಿ |
| ೫೭. ರುಧಿರೋದ್ಗಾರಿ | ೫೮. ರಕ್ತಾಕ್ಷಿ | ೫೯. ಕ್ರೋಧನ | ೬೦. ಕ್ಷಯ |

## ೨. ಋತುಗಳು (೬)

| | |
|---|---|
| ೧. ವಸಂತ (ಚೈತ್ರ, ವೈಶಾಖ) | ೪. ಶರತ್(ಆಶ್ವಯುಜ, ಕಾರ್ತಿಕ) |
| ೨. ಗ್ರೀಷ್ಮ(ಜ್ಯೇಷ್ಠ, ಆಷಾಢ) | ೫. ಹೇಮಂತ(ಮಾರ್ಗಶಿರ, ಪುಷ್ಯ) |
| ೩. ವರ್ಷ (ಶ್ರಾವಣ, ಭಾದ್ರಪದ) | ೬. ಶಿಶಿರ (ಮಾಘ, ಫಾಲ್ಗುಣ) |

## ೩. ತಿಥಿಗಳು (೧೫)

| | | |
|---|---|---|
| ೦೧. ಪ್ರತಿಪತ್(ಪಾಡ್ಯ) | ೦೬. ಷಷ್ಠೀ | ೧೧. ಏಕಾದಶೀ |
| ೦೨. ದ್ವಿತೀಯಾ(ಬಿದಿಗೆ) | ೦೭. ಸಪ್ತಮೀ | ೧೨. ದ್ವಾದಶೀ |
| ೦೩. ತೃತೀಯಾ(ತದಿಗೆ) | ೦೮. ಅಷ್ಟಮೀ | ೧೩. ತ್ರಯೋದಶೀ |
| ೦೪. ಚತುರ್ಥೀ(ಚೌತಿ) | ೦೯. ನವಮೀ | ೧೪. ಚತುರ್ದಶೀ |
| ೦೫. ಪಂಚಮೀ | ೧೦. ದಶಮೀ | ೧೫. ಪೂರ್ಣಿಮಾ, ಅಮಾವಾಸ್ಯಾ |

## ೪. ತಿಥಿಗಳ ಅಭಿಮಾನಿ ದೇವತೆಗಳು (ವರಾಹಪುರಾಣ)

| | |
|---|---|
| ಪ್ರತಿಪತ್ – ಅಗ್ನಿ | ದ್ವಿತೀಯಾ – ಬ್ರಹ್ಮಾ |
| ತೃತೀಯಾ – ಗೌರೀ | ಚತುರ್ಥೀ – ಗಣೇಶ |
| ಪಂಚಮೀ – ನಾಗ | ಷಷ್ಠೀ – ಸ್ಕಂದ (ಇಂದ್ರ) |
| ಸಪ್ತಮೀ – ಸೂರ್ಯ | ಅಷ್ಟಮೀ – ದುರ್ಗಾ (ಸೋಮ, ವಿಶ್ವೇದೇವತೆಗಳು) |

ನವಮೀ (ಲಕ್ಷ್ಮೀ, ವಾಯು, ವಸುಗಳು) ದಶಮೀ (ವಿಷ್ಣು)
ಏಕಾದಶೀ (ವಿಷ್ಣು) ದ್ವಾದಶೀ (ವಿಷ್ಣು)
ತ್ರಯೋದಶೀ(ಕಾಮ,ಕುಬೇರ,ಗರುಡ) ಶುಕ್ಲಚತುರ್ದಶೀ(ಮರುದ್ಗಣ, ಯಮ)
ಕೃಷ್ಣಚತುರ್ದಶೀ (ಶಿವ) ಪೂರ್ಣಿಮಾ (ಚಂದ್ರ)
ಅಮಾವಾಸ್ಯಾ (ಪಿತೃದೇವತೆಗಳು)

## ೫. ವಾಸರಗಳು

ರವಿವಾರ (ಭಾನುವಾಸರ)-ಸೂರ್ಯ ಗುರುವಾರ (ಬೃಹಸ್ಪತಿವಾಸರ) -ಬೃಹಸ್ಪತಿ
ಸೋಮವಾರ (ಇಂದುವಾಸರ)-ಚಂದ್ರ ಶುಕ್ರವಾರ (ಭಾರ್ಗವವಾಸರ) - ಶುಕ್ರ
ಮಂಗಳವಾರ (ಕುಜವಾಸರ)- ಮಂಗಳ ಶನಿವಾರ (ಮಂದವಾಸರ) - ಶನೈಶ್ಚರ
ಬುಧವಾರ (ಸೌಮ್ಯವಾಸರ) - ಬುಧ

## ೬. ನಕ್ಷತ್ರಗಳು(೨೭)

| | | |
|---|---|---|
| ೦೧. ಅಶ್ವಿನೀ | ೦೨. ಭರಣೀ | ೦೩. ಕೃತ್ತಿಕಾ |
| ೦೪. ರೋಹಿಣೀ | ೦೫. ಮೃಗಶಿರಾ | ೦೬. ಆರ್ದ್ರಾ |
| ೦೭. ಪುನರ್ವಸು | ೦೮. ಪುಷ್ಯಾ | ೦೯. ಆಶ್ಲೇಷಾ |
| ೧೦. ಮಘಾ | ೧೧. ಪೂರ್ವಫಲ್ಗುನೀ | ೧೨. ಉತ್ತರಫಲ್ಗುನೀ |
| ೧೩. ಹಸ್ತಾ | ೧೪. ಚಿತ್ರಾ | ೧೫. ಸ್ವಾತೀ |
| ೧೬. ವಿಶಾಖಾ | ೧೭. ಅನುರಾಧಾ | ೧೮. ಜ್ಯೇಷ್ಠಾ |
| ೧೯. ಮೂಲಾ | ೨೦. ಪೂರ್ವಾಷಾಢಾ | ೨೧. ಉತ್ತರಾಷಾಢಾ |
| ೨೨. ಶ್ರವಣ | ೨೩. ಧನಿಷ್ಠಾ | ೨೪. ಶತಭಿಷಾ |
| ೨೫. ಪೂರ್ವಾಭಾದ್ರಾ | ೨೬. ಉತ್ತರಾಭಾದ್ರಾ | ೨೭. ರೇವತೀ |

## ೭. ನಕ್ಷತ್ರಗಳ ಅಭಿಮಾನಿ ದೇವತೆಗಳು

| | |
|---|---|
| ೦೧. ಅಶ್ವಿನೀ (ಅಶ್ವಿನೀ ದೇವತೆಗಳು) | ೦೨. ಭರಣೀ (ಯಮ) |
| ೦೩. ಕೃತ್ತಿಕಾ (ಅಗ್ನಿ) | ೦೪. ರೋಹಿಣೀ (ಬ್ರಹ್ಮ) |
| ೦೫. ಮೃಗಶಿರ(ಚಂದ್ರ) | ೦೬. ಆರ್ದ್ರಾ (ರುದ್ರ) |
| ೦೭. ಪುನರ್ವಸು (ಅದಿತಿ) | ೦೮. ಪುಷ್ಯ(ಬೃಹಸ್ಪತಿ) |

೦೯. ಆಶ್ಲೇಷ (ಸರ್ಪ) ೧೯. ಮಘಾ (ಪಿತೃದೇವತೆಗಳು)
೨೦. ಪೂರ್ವಾಫಲ್ಗುನೀ (ಭಗ) ೨೧. ಉತ್ತರಾಫಲ್ಗುನೀ (ಅರ್ಯಮಾ)
೨೨. ಹಸ್ತ (ಸೂರ್ಯ) ೨೩. ಚಿತ್ರಾ(ತ್ವಷ್ಟ್ರ)
೧೦. ಸ್ವಾತೀ (ವಾಯು) ೧೧. ವಿಶಾಖಾ (ಇಂದ್ರ,ಅಗ್ನಿ)
೧೨. ಅನುರಾಧಾ (ಮಿತ್ರ) ೧೩. ಜ್ಯೇಷ್ಠಾ(ಇಂದ್ರ)
೧೪. ಮೂಲ (ನಿರ್ಋತಿ) ೧೫. ಪೂರ್ವಾಷಾಢಾ (ಬುಧ)
೧೬. ಉತ್ತರಾಷಾಢಾ(ವಿಶ್ವೇದೇವಾಃ) ೧೭. ಶ್ರವಣ (ವಿಷ್ಣು)
೧೮. ಧನಿಷ್ಠಾ(ವಸು) ೨೪. ಶತಭಿಷಾ (ವರುಣ)
೨೫. ಪೂರ್ವಾಭಾದ್ರಾ(ಅಜೈಕಪಾತ್) ೨೬. ಉತ್ತರಾಭಾದ್ರಾ(ಅಹಿರ್ಬುಧ್ನಿ)
೨೭. ರೇವತೀ (ಪೂಷಾ)

## ೮. ಯೋಗಗಳು (೨೭)

| | | | |
|---|---|---|---|
| ೦೧. ವಿಷ್ಕಂಭ | ೦೨. ಪ್ರೀತಿ | ೦೩. ಆಯುಷ್ಮಾನ್ | ೦೪. ಸೌಭಾಗ್ಯ |
| ೦೫. ಶೋಭನ | ೦೬. ಅತಿಗಂಡ | ೦೭. ಸುಕರ್ಮಾ | ೦೮. ಧೃತಿ |
| ೦೯. ಶೂಲ | ೧೦. ಗಂಡ | ೧೧. ವೃದ್ಧಿ | ೧೨. ಧ್ರುವ |
| ೧೩. ವ್ಯಾಘಾತ | ೧೪. ಹರ್ಷಣ | ೧೫. ವಜ್ರ | ೧೬. ಸಿದ್ಧಿ |
| ೧೭. ವ್ಯತೀಪಾತ | ೧೮. ವರೀಯಾನ್ | ೧೯. ಪರಿಘ | ೨೦. ಶಿವ |
| ೨೧. ಸಿದ್ಧ | ೨೨. ಸಾಧ್ಯ | ೨೩. ಶುಭ | ೨೪. ಶುಕ್ಲ |
| ೨೫. ಬ್ರಹ್ಮ | ೨೬. ಐಂದ್ರ | ೨೭. ವೈಧೃತಿ | |

## ೯. ಕರಣಗಳು (೧೧)

| | | | |
|---|---|---|---|
| ೦೧. ಬವ | ೦೨. ಬಾಲವ | ೦೩. ಕೌಲವ | ೦೪. ತೈತಿಲ |
| ೦೫. ಗರಜ | ೦೬. ವಣಿಕ್ | ೦೭. ಭದ್ರಾ | ೦೮. ಶಕುನಿ |
| ೦೯. ಚತುಷ್ಪಾತ್ | ೧೦. ನಾಗವಾನ್ | ೧೧. ಕಿಂಸ್ತುಘ್ನ | |

## ೧೦. ರಾಶಿಗಳು (೧೨)

| | | |
|---|---|---|
| ೦೧. ಮೇಷ | ೦೨. ವೃಷಭ | ೦೩. ಮಿಥುನ |
| ೦೪. ಕರ್ಕಾಟಕ | ೦೫. ಸಿಂಹ | ೦೬. ಕನ್ಯಾ |

೦೭. ತುಲಾ ೦೮. ವೃಶ್ಚಿಕ ೦೯. ಧನುಸ್

೧೦. ಮಕರ ೧೧. ಕುಂಭ ೧೨. ಮೀನ

## ೧೧. ಮೇಷಾದಿರಾಶಿಗಳ ಅಭಿಮಾನಿ ದೇವತೆಗಳು (೧೨)

೦೧. ಮೇಷ-ಮಂಗಳ ೦೨. ವೃಷಭ-ಶುಕ್ರ ೦೩. ಮಿಥುನ-ಬುಧ

೦೪. ಕರ್ಕ-ಚಂದ್ರ ೦೫. ಸಿಂಹ-ರವಿ ೦೬. ಕನ್ಯಾ-ಬುಧ

೦೭. ತುಲಾ-ಶುಕ್ರ ೦೮. ವೃಶ್ಚಿಕ-ಮಂಗಳ ೦೯. ಧನು-ಗುರು

೧೦. ಮಕರ-ಶನಿ ೧೧. ಕುಂಭ-ಶನಿ ೧೨. ಮೀನ-ಗುರು

## ೧೨. ಗ್ರಹಗಳು (೯)

೧. ರವಿ ೨. ಚಂದ್ರ ೩. ಕುಜ(ಮಂಗಳ) ೪. ಬುಧ

೫. ಗುರು ೬. ಶುಕ್ರ ೭. ಶನಿ ೮. ರಾಹು ೯. ಕೇತು

೧೦. ಸಾಮಾನ್ಯವಾಗಿ ಗ್ರಹಗಳನ್ನು ಕೇವಲ ಅಚೇತನಗಳಂತೆ ನೋಡುವುದು ವೈಜ್ಞಾನಿಕ ಪದ್ಧತಿ. ಅವುಗಳ ದೇವತೆಗಳನ್ನು ಅರ್ಥಮಾಡಿಕೊಂಡು ಪೂಜಿಸುವುದು ಸಾಮಾನ್ಯ ಧಾರ್ಮಿಕ ಪದ್ಧತಿ. ಆದರೆ, ಆ ದೇವತೆಗಳು ಯಾರು? ಅವರ ಹಿರಿಮೆ ಗರಿಮೆಗಳೇನು? ಅವರ ಆರಾಧನೆ ಕ್ರಮ ಎಂತಹುದು? ಅವರ ಆರಾಧನೆಗೆ ವಿಹಿತವಾದ ಮಂತ್ರಗಳು, ಪೂಜಾವಿಧಾನ ಮೊದಲಾದವುಗಳ ಪರಿಕಲ್ಪನೆ ಇದ್ದಲ್ಲಿ ಮಾತ್ರವೇ ಅದು ಶಾಸ್ತ್ರೀಯವಾದ ನವಗ್ರಹ ಪೂಜೆಯಾಗಿ ಅನಿಷ್ಟ ನಿವಾರಣೆಗೂ, ಇಷ್ಟ ಪ್ರಾಪ್ತಿಗೂ ಸಾಧನವಾಗುವುದು. ಕೇವಲ ಜಡಗಳಿಗೆ ಇಚ್ಛಾದಿಗಳು ಸರ್ವಥಾ ಇಲ್ಲವಾದ್ದರಿಂದ ಅವುಗಳ ಆರಾಧನೆ ಎಂಬುದು ಅವಿವೇಕ. ಇನ್ನು ದೇವತೆಗಳನ್ನು ಅವರ ಹಿರಿಮೆಯ ಇತಿಮಿತಿಗಳನ್ನು ಅರ್ಥಮಾಡಿಕೊಳ್ಳದೆ ಪೂಜಿಸುವುದು ಸಹ ಸಫಲವೆನ್ನಿಸದು. ಯಾವುದೇ ಪೂಜಾವಿಧಾನವು ಸಹ ಅರ್ಥವತ್ತಾಗುವುದು, ಸಫಲವಾಗುವುದು ವಿಹಿತ ತತ್ತ್ವಜ್ಞಾನದ ಹಿನ್ನೆಲೆಯನ್ನು ಹೊಂದಿದ್ದಾಗ ಮಾತ್ರ. ಈ ವಿವರವನ್ನು ತದ್ದೇವತಾಸ್ತದ್ಗಣಾಃ ಎಂಬ ಇಲ್ಲಿಯ ಪದ ಸ್ಪಷ್ಟಪಡಿಸುವುದು.

೧೧. 'ಗಣ' ಎಂದರೆ ಗುಂಪು ಎಂದರ್ಥ. ಗ್ರಹಾದಿಗಳಿಗೆ ದೇವತೆ ಎಂದು ತಿಳಿಯುವಂತೆ ಅವು ಸೇರುವ ಗಣವನ್ನು ಸಹ ತಿಳಿಯಬೇಕು. ಎಂದರೆ, ಆದಿತ್ಯ ಸೂರ್ಯಗ್ರಹದ ಅಧಿದೇವತೆಯಾದರೆ, ದ್ವಾದಶಾದಿತ್ಯರು ಎಂಬುದು ಆ ಗಣಕ್ಕೆ

ಸೇರುವ ದೇವತೆಗಳು. ಅದರಂತೆ ಏಕಾದಶ ರುದ್ರರು, ದಶವಿಶ್ವೇದೇವತೆಗಳು, ಅಷ್ಟವಸುಗಳು ಮೊದಲಾಗಿ ತಿಳಿಯಬೇಕು ಎಂದರ್ಥ.

೧೨. **'ಸಂಧ್ಯಾಃ'** 'ಸಂಧ್ಯಾಕಾಲ'ದ ಅಭಿಮಾನಿದೇವತೆಗಳನ್ನು ತಿಳಿದು ಆರಾಧಿಸುವುದು ಎಂದರೆ, ಸಂಧ್ಯಾಕಾಲದಲ್ಲಿ ಸಂಧ್ಯಾವಂದನೆಯನ್ನು ಮಾಡುವ ಮೂಲಕ ಭಗವಂತನಿಂದ ಹಿಡಿದು ಸಮಸ್ತ ದೇವತಾ ಪರಿವಾರವನ್ನು ಆರಾಧಿಸುವುದು ಎಂದರ್ಥ. ಇಲ್ಲಿಯ ಬಹುವಚನವು ಪ್ರಾತಃ, ಮಾಧ್ಯಾಹ್ನಿಕ ಹಾಗೂ ಸಾಯಂ ಎಂಬುದಾಗಿ ಸಂಧ್ಯಾಕಾಲಗಳು ಮೂರು ಎಂದು ಸೂಚಿಸುವುದು.

೧೩. **'ಸಕಲ ಸ್ಥಾವರ-ಜಂಗಮ'**ಗಳು ಎಂದರೆ, ಇಲ್ಲಿ ತಿಳಿಸಿರುವ ಗ್ರಹ-ನಕ್ಷತ್ರಗಳು ಹಾಗೂ ಅವುಗಳ ಅಭಿಮಾನಿದೇವತೆಗಳು ಮೊದಲಾದವು ಎಂದರ್ಥ.

೧೪. ಇಂತಹ ಸಮಗ್ರ ತಿಳುವಳಿಕೆಯ ಹಿನ್ನೆಲೆಯ ಆರಾಧನೆಯು ಮಂಗಲಕಾರಕ ಎಂದು ಒಟ್ಟು ಭಾವ.

೧೫. ಗ್ರಹಗಳ ಬಗ್ಗೆ ಹೇಗೋ ಹಾಗೆ ನಕ್ಷತ್ರ, ತಿಥಿ, ಯೋಗ, ಕರಣ ಮೊದಲಾದವುಗಳ ಬಗ್ಗೆಯೂ ಸಹ ಶುಭಕರತ್ವವನ್ನು ತಿಳಿಯಬೇಕು. ವೈಷ್ಣವರಿಗೆ ತಿಥ್ಯಭಿಮಾನಿಗಳ ಪರಿಜ್ಞಾನವಿದ್ದು ಸಕಲವೂ ಶ್ರೀಹರಿಯ ಅಧೀನ ಎಂದು ತಿಳಿದು ಶಾಸ್ತ್ರೋಕ್ತ ವಿಹಿತ ಕರ್ಮದಲ್ಲಿ ತೊಡಗಿದವರಿಗೆ ಏಕಾದಶೀ, ಕೃಷ್ಣಜಯಂತೀ ಮೊದಲಾದ ಕಡ್ಡಾಯವಾಗಿ ವಿಹಿತವಾದ ವ್ರತಗಳನ್ನು ಆಚರಿಸುವವರಿಗೆ ಎಲ್ಲವೂ ಶುಭಕರವೇ ಆಗಿವೆ. 'ಸಕಲಗ್ರಹಬಲ ನೀನೇ ಸರಸಿಜಾಕ್ಷ' ಎಂಬ ಶ್ರೀಪುರಂದರದಾಸರ ಕೃತಿ ಇಲ್ಲಿ ಸ್ಮರಣೀಯ. ಅದರಂತೆ –

ಇಂದಿನ ದಿನವೇ ಶುಭದಿನವು –ಇಂದಿನ ವಾರ ಶುಭವಾರ।
ಇಂದಿನ ತಾರೆ ಶುಭತಾರೆ –ಇಂದಿನ ಕರಣ ಶುಭಕರಣ।
ಇಂದಿನ ಯೋಗ ಶುಭಯೋಗ –ಇಂದಿನ ಲಗ್ನ ಶುಭಲಗ್ನ।
ಇಂದು ಪುರಂದರವಿಠ್ಠಲರಾಯನ- ಪಾಡಿದದಿನವೇ ಶುಭದಿನವು ॥

೧೬. ತಿಥಿ, ವಾರಾದಿ ಮೊದಲಾದವುಗಳ ಪರಿಜ್ಞಾನಕ್ಕೆ ವಿಶೇಷ ಫಲವನ್ನು ತಿಳಿಸಿರುವರು:

ತಿಥೇಶ್ಚ ಶ್ರಿಯಮಾಪ್ನೋತಿ ವಾರಾದಾಯುಷ್ಯವರ್ಧನಮ್।
ನಕ್ಷತ್ರಾದ್ಧರತೇ ಪಾಪಂ ಯೋಗಾದ್ರೋಗನಿವಾರಣಮ್।
ಕರಣಾತ್ ಕಾರ್ಯಸಿದ್ಧಿಶ್ಚ ಪಂಚಾಂಗಫಲಮುತ್ತಮಮ್॥

– ತಿಥಿ, ವಾರ, ನಕ್ಷತ್ರ, ಯೋಗ ಹಾಗೂ ಕರಣ ಇವುಗಳನ್ನು ಸರಿಯಾಗಿ ತಿಳಿಯುವುದರಿಂದ ಕ್ರಮವಾಗಿ ಸಂಪತ್ಪ್ರಾಪ್ತಿ, ಆಯುಷ್ಯವೃದ್ಧಿ, ಪಾಪಪರಿಹಾರ,

ರೋಗೋಪಶಮನ ಹಾಗೂ ಕಾರ್ಯಸಿದ್ಧಿ ಎಂಬ ಫಲಗಳು ಲಭಿಸುವವು ಎಂದು ಇದರ ಅರ್ಥ.

೧೭. ಈ ಮಂಗಲಾಷ್ಟಕದಲ್ಲಿ ಸ್ತ್ರೀಯರ ಹಾಗೂ ಕ್ಷೇತ್ರಗಳ ಉಲ್ಲೇಖ ಬಿಟ್ಟು ಹೋದಂತೆ ಕಾಣುವುದು. ವಸ್ತುಸ್ಥಿತಿ ಹಾಗಿಲ್ಲ. 'ತತ್ಸ್ತ್ರಿಯಃ' ಎಂಬ ಎರಡನೇ ಶ್ಲೋಕದ ಪದದಿಂದ ದೇವತಾಸ್ತ್ರೀಯರನ್ನೊಳಗೊಂಡಂತೆ ಸಕಲ ಪೂಜ್ಯಸ್ತ್ರೀಯರ ಉಲ್ಲೇಖ ಸೂಚಿತ ಎಂದು ಆಗಲೇ ತಿಳಿಸಿಯಾಗಿದೆ. ಅದರಂತೆ, ಗಂಗಾದಿ ನದಿಗಳನ್ನು ಉಲ್ಲೇಖಿಸುವ ಶ್ಲೋಕದಲ್ಲಿ ಆಯಾ ನದಿಗಳ, ತೀರ್ಥಗಳ ತೀರದಲ್ಲಿನ ಕ್ಷೇತ್ರಗಳ ಉಲ್ಲೇಖವೂ ಸೂಚಿತ ಎಂದು ತಿಳಿಯಬೇಕು. ಸಾಮಾನ್ಯವಾಗಿ ತೀರ್ಥಗಳ ಸನ್ನಿಧಾನದಲ್ಲಿಯೇ ಕ್ಷೇತ್ರಗಳು ಇರುವವು ಎಂಬ ಕಾರಣದಿಂದ ಇದು ಯುಕ್ತ ಎನ್ನಿಸುವುದು. ಶ್ರೀವಾದಿರಾಜಸ್ವಾಮಿಗಳ ತೀರ್ಥಪ್ರಬಂಧದಲ್ಲಿ ಗಂಗೆಯನ್ನು ವರ್ಣಿಸುವಾಗ ಅದರ ತೀರದಲ್ಲಿನ ಹೃಷೀಕೇಶಾದಿ ಕ್ಷೇತ್ರಗಳನ್ನು ಉಲ್ಲೇಖಿಸಿರುವುದು ಇದಕ್ಕೆ ಗಮಕ ಎಂದು ತಿಳಿಯಬಹುದು[೧].

೧೮. ಮುಖ್ಯವಾಗಿ ಈ ಕೆಳಗಿನ ಮಾತು ಈ ಎಲ್ಲ ವಿವರಗಳ ಸಾರವಾಗಿದೆ:

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ।
ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಽಂಘ್ರಿಯುಗಂ ಸ್ಮರಾಮಿ ॥

ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ ।
ಮಂಗಲಂ ದೇವಕೀಪುತ್ರೋ ಮಂಗಲಂ ಗರುಡಧ್ವಜಃ ॥

೧೯. ಗ್ರಹಗಳು, ನಕ್ಷತ್ರಗಳು, ಮುಹೂರ್ತಗಳು ಮೊದಲಾಗಿ ಪ್ರತಿಯೊಂದು ಸಹ ಶುಭಫಲವನ್ನು ನೀಡುವುದು ಮುಖ್ಯವಾಗಿ ಅರ್ಹತೆಯುಳ್ಳ ದೈವಜ್ಞರಿಂದ ಹೇಳಲ್ಪಟ್ಟಾಗ ಮಾತ್ರ. ಅದರಂತೆ, ಅವು ಶುಭಪ್ರದವಾಗುವುದು ಭಗವದ್ಭಕ್ತರು, ವಿವೇಕಿಗಳು, ನಿಸ್ವಾರ್ಥಿಗಳು, ಲೋಕಹಿತವನ್ನು ಬಯಸುವ ವಿಶಾಲ ಮನಸ್ಸಿನವರೂ ಆದ ಸಾತ್ವಿಕರಿಗೇ ಹೊರತು ಇತರರಿಗಲ್ಲ ಎಂಬ ವಿಶೇಷವನ್ನು ಶಾಸ್ತ್ರಗಳು ಸಾರಿವೆ:

ಪ್ರಸನ್ನ ದೈವಜ್ಞವಿಧಿಪ್ರದಿಷ್ಟಂ ಸುಖಪ್ರದಂ ದುರ್ಲಭಮಲ್ಪಪುಣ್ಯೈಃ ।
ಸಪ್ತಾಂಗಸಂಪತ್ತಿಸಮೇತಮೇತನ್ಮುಹೂರ್ತರಾಜ್ಯಂ ಸುಕೃತೋ ಲಭಂತೇ ॥

*****

೧. ಶ್ರೀನಾರಾಯಣರಾಮಗೋಪತಿಹೃಷೀಕೇಶಾದಿರೂಪೋಽಕ್ಷಮ–
ಸ್ತ್ವಾಂ ಹಾತುಂ ಹರಿಸೂಕರಾಕೃತಿರಥ ಶ್ರೀದೇವಹೂತ್ಯಾತ್ಮಜಃ ।
ವೇಣೀಮಾಧವಬಿಂದುಮಾಧವತನುಸ್ತೀರೇ ವ್ಯಧತ್ತ ಸ್ಥಿತಿಂ
ಗಂಗೇ ಕಿಂ ಬಹುನಾಽಧುನಾಽಪಿ ವಸತಿ ತ್ವದ್ದುರ್ಗಗೇಹೇಽಪ್ಯಸೌ ॥ – ತೀರ್ಥಪ್ರಬಂಧ (ಉ.ಪ್ರ/೨೧)

- ೯ -

## ಫಲಶ್ರುತಿ

**ಇತ್ಯೇತದ್ವರಮಂಗಲಾಷ್ಟಕಮಿದಂ [೧]ಶ್ರೀರಾಜರಾಜೇಶ್ವರೈ[೨]-**
**ರಾಖ್ಯಾತಂ ಜಗತಾಮಭೀಷ್ಟಫಲದಂ[೩] ಸರ್ವಾಶುಭಧ್ವಂಸನಮ್ ।**

೧. ಶ್ರೀರಾಜರಾಜೇಶ್ವರೇಣಾಖ್ಯಾತಂ (ಪಾ.)

೨. ಇದು ಕೆಲವು ಲಿಖಿತ ಪ್ರತಿಗಳಲ್ಲಿ ಶ್ರೀವಾದಿರಾಜಕೃತ ಎಂಬುದಾಗಿಯೂ ಕಂಡುಬರುವುದು. ಅದಕ್ಕೆ ದೊರೆತಿರುವ ಒಂದು ವ್ಯಾಖ್ಯಾನದಲ್ಲೂ ಆ ರೀತಿಯ ಉಲ್ಲೇಖವಿದೆ. ಆದರೆ, ಲೋಕದಲ್ಲಿ ಪ್ರಸಾರವಿರುವಂತೆ ಹಾಗೂ ಉಡುಪಿಯ ಪ್ರಾಂತದಲ್ಲಿ ಪ್ರಸಿದ್ಧಿಗೆ ಬಂದಿರುವಂತೆ ಇದು ಶ್ರೀರಾಜರಾಜೇಶ್ವರತೀರ್ಥರ ರಚನೆ ಎಂದೇ ತಿಳಿಯುವುದು.

೩. ಶ್ರೀಹರಿಯ, ದೇವತೆಗಳ, ಋಷಿಮುನಿಗಳ, ರಾಜರ, ನದಿನದಗಳ, ಪರ್ವತಗಳ, ವೇದಾದಿಶಾಸ್ತ್ರಗಳ, ಗ್ರಹನಕ್ಷತ್ರಾದಿಗಳ ಸ್ಮರಣೆ ಸಕಲ ಪಾಪಪರಿಹಾರಕ ಹಾಗೂ ವಿಶೇಷ ಪುಣ್ಯಪ್ರದಾಯಕ ಎಂಬ ಇಲ್ಲಿಯ ಫಲಶ್ರುತಿ ಮಹಾಭಾರತಾದಿಗಳಲ್ಲಿ ಸ್ಫುಟವಾಗಿ ನಿರೂಪಿತವಾಗಿದೆ:

ಕೀರ್ತಿತಂ ಪರಮಂ ಬ್ರಹ್ಮ ಸರ್ವಶ್ರುತಿಪರಾಯಣಮ್ ।
ಮಂಗಲ್ಯಂ ಸರ್ವಭೂತಾನಾಂ ಪವಿತ್ರಂ ಬಹುಕೀರ್ತಿತಮ್ ॥
ವ್ಯಾಧಿಪ್ರಶಮನಂ ಶ್ರೇಷ್ಠಂ ಪೌಷ್ಟಿಕಂ ಸರ್ವಕರ್ಮಣಾಮ್ ।
ಪ್ರಯತಃ ಕೀರ್ತಯೇಚ್ಚೈತಾನ್ ಕಲ್ಯಂ ಸಾಯಂ ಚ ಭಾರತ ॥
ಏತೇ ವೈ ಪಾಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ಚ ।
ಏತೇ ವಿನಾಯಕಾಃ ಶ್ರೇಷ್ಠಾ ದಕ್ಷಾಃ ಶಾಂತಾ ಜಿತೇಂದ್ರಿಯಾಃ ॥
ನರಾಣಾಮಶುಭಂ ಸರ್ವೇ ವ್ಯಪೋಹಂತಿ ಪ್ರಕೀರ್ತಿತಾಃ ।
ಸಾಕ್ಷಿಭೂತಾ ಮಹಾತ್ಮಾನಃ ಪಾಪಸ್ಯ ಸುಕೃತಸ್ಯ ಚ ॥
ಏತಾನ್ ವೈ ಕಲ್ಯಮುತ್ಥಾಯ ಕೀರ್ತಯನ್ ಶುಭಮಶ್ನುತೇ ।
ನಾಗ್ನಿಚೌರಭಯಂ ತಸ್ಯ ನ ಮಾರ್ಗಪ್ರತಿರೋಧನಮ್ ॥
ಏತಾನ್ ಕೀರ್ತಯತಾಂ ನಿತ್ಯಂ ದುಃಸ್ವಪ್ನೋ ನಶ್ಯತೇ ನೃಣಾಮ್ ।
ಮುಚ್ಯತೇ ಸರ್ವಪಾಪೇಭ್ಯಃ ಸ್ವಸ್ತಿಮಾಂಶ್ಚ ಗೃಹಾನ್ ವ್ರಜೇತ್ ॥
ದೀಕ್ಷಾಕಾಲೇಷು ಸರ್ವೇಷು ಯಃ ಪಠೇನ್ನಿಯತೋ ದ್ವಿಜಃ ।
ನ್ಯಾಯವಾನಾತ್ಮನಿರತಃ ಕ್ಷಾಂತೋ ದಾಂತೋಽನಸೂಯಕಃ ॥
ರೋಗಾರ್ತೋ ವ್ಯಾಧಿಯುಕ್ತೋ ವಾ ಪಠನ್ ಪಾಪಾತ್ ಪ್ರಮುಚ್ಯತೇ ।
ವಾಸ್ತುಮಧ್ಯೇ ತು ಪಠತಃ ಕುಲೇ ಸ್ವಸ್ತ್ಯಯನಂ ಭವೇತ್ ॥
ಕ್ಷೇತ್ರಮಧ್ಯೇ ತು ಪಠತಃ ಸರ್ವಂ ಸಸ್ಯಂ ಪ್ರರೋಹತಿ ।
ಗಚ್ಛತಃ ಕ್ಷೇಮಮಧ್ವಾನಂ ಗ್ರಾಮಾಂತರಗತಃ ಪಠನ್ ॥
ಆತ್ಮನಶ್ಚ ಸುತಾನಾಂ ಚ ದಾರಾಣಾಂ ಚ ಧನಸ್ಯ ಚ ।
ಬೀಜಾನಾಮೋಷಧೀನಾಂ ಚ ರಕ್ಷಾಮೇತಾಂ ಪ್ರಯೋಜಯೇತ್ ॥
ಏತಾನ್ ಸಂಗ್ರಾಮಕಾಲೇ ತು ಪಠತಃ ಕ್ಷತ್ರಿಯಸ್ಯ ತು ।
ವ್ರಜಂತಿ ರಿಪವೋ ನಾಶಂ ಕ್ಷೇಮಂ ಚ ಪರಿವರ್ತತೇ ॥

ಏತಾನ್ ದೈವೇ ಚ ಪಿತ್ರ್ಯೇ ಚ ಪಠತಃ ಪುರುಷಸ್ಯ ಹಿ।
ಭುಂಜತೇ ಪಿತರಃ ಕವ್ಯಂ ಹವ್ಯಂ ಚ ತ್ರಿದಿವೌಕಸಃ॥
ನ ವ್ಯಾಧಿಶ್ಚಾಪದಭಯಂ ನ ದ್ವಿಪಾನ್ನ ಹಿ ತಸ್ಕರಾತ್।
ಕಶ್ಮಲಂ ಲಘುತಾಂ ಯಾತಿ ಪಾಪ್ಮನಾ ಚ ಪ್ರಮುಚ್ಯತೇ॥
ಯಾನಪಾತ್ರೇ ಚ ಯಾನೇ ಚ ಪ್ರವಾಸೇ ರಾಜವೇಶ್ಮನಿ।
ಪರಾಂ ಸಿದ್ಧಿಮವಾಪ್ನೋತಿ ಸಾವಿತ್ರೀಂ ಹ್ಯುತ್ತಮಾಂ ಪಠನ್॥
ನ ಚ ರಾಜಭಯಂ ತೇಷಾಂ ನ ಪಿಶಾಚಾನ್ನ ರಾಕ್ಷಸಾತ್।
ನಾಗ್ನ್ಯಂಬುಪವನವ್ಯಾಲಾದ್ಭಯಂ ತಸ್ಯೋಪಜಾಯತೇ॥
ಚತುರ್ಣಾಮಪಿ ವರ್ಣಾನಾಮಾಶ್ರಮಸ್ಯ ವಿಶೇಷತಃ।
ಕರೋತಿ ಸತತಂ ಶಾಂತಿಂ ಸಾವಿತ್ರೀಮುತ್ತಮಾಂ ಪಠನ್॥
ನಾಗ್ನಿರ್ದಹತಿ ಕಾಷ್ಠಾನಿ ಸಾವಿತ್ರೀ ಯತ್ರ ಪಠ್ಯತೇ।
ನ ತತ್ರ ಬಾಲೋ ಮ್ರಿಯತೇ ನ ಚ ತಿಷ್ಠಂತಿ ಪನ್ನಗಾಃ॥
ನ ತೇಷಾಂ ವಿದ್ಯತೇ ದುಃಖಂ ಗಚ್ಛಂತಿ ಪರಮಾಂ ಗತಿಮ್।
ಯೇ ಶೃಣ್ವಂತಿ ಮಹದ್ಬ್ರಹ್ಮ ಸಾವಿತ್ರೀಗುಣಕೀರ್ತನಮ್॥
ಗವಾಂ ಮಧ್ಯೇ ತು ಪಠತೋ ಗಾವೋಽಸ್ಯ ಬಹುವತ್ಸಲಾಃ।
ಪ್ರಸ್ಥಾನೇ ವಾ ಪ್ರವಾಸೇ ವಾ ಸರ್ವಾವಸ್ಥಾಂ ಗತಃ ಪಠೇತ್॥
ಜಪತಾಂ ಜುಹ್ವತಾಂ ಚೈವ ನಿತ್ಯಂ ಚ ಪ್ರಯತಾತ್ಮನಾಮ್।
ಋಷೀಣಾಂ ಪರಮಂ ಜಪ್ಯಂ ಗುಹ್ಯಮೇತನ್ನರಾಧಿಪ॥
ಯಾಥಾತಥ್ಯೇನ ಸಿದ್ಧಸ್ಯ ಇತಿಹಾಸಂ ಪುರಾತನಮ್।
ಪರಾಶರಮತಂ ದಿವ್ಯಂ ಶಕ್ರಾಯ ಕಥಿತಂ ಪುರಾ॥
ತದೇತತ್ ತೇ ಸಮಾಖ್ಯಾತಂ ತಥ್ಯಂ ಬ್ರಹ್ಮ ಸನಾತನಮ್।
ಹೃದಯಂ ಸರ್ವಭೂತಾನಾಂ ಶ್ರುತಿರೇಷಾ ಸನಾತನೀ॥
ಸೋಮಾದಿತ್ಯಾನ್ವಯಾಃ ಸರ್ವೇ ರಾಘವಾಃ ಕುರವಸ್ತಥಾ।
ಪಠಂತಿ ಶುಚಯೋ ನಿತ್ಯಂ ಸಾವಿತ್ರೀಂ ಪ್ರಾಣಿನಾಂ ಗತಿಮ್॥
ಅಭ್ಯಾಸೇ ನಿತ್ಯಂ ದೇವಾನಾಂ ಸಪ್ತರ್ಷೀಣಾಂ ಧ್ರುವಸ್ಯ ಚ।
ಮೋಕ್ಷಣಂ ಸರ್ವಕೃಚ್ಛ್ರಾಣಾಂ ಮೋಚಯತ್ಯಶುಭಾತ್ ಸದಾ॥
ವೃದ್ಧೈಃ ಕಾಶ್ಯಪಗೌತಮಪ್ರಭೃತಿಭಿರ್ಭೃಗ್ವಂಗಿರೋಽತ್ರ್ಯಾದಿಭಿಃ।
ಶುಕ್ರಾಗಸ್ತ್ಯಬೃಹಸ್ಪತಿಪ್ರಭೃತಿಭಿರ್ಬ್ರಹ್ಮರ್ಷಿಭಿಃ ಸೇವಿತಮ್।
ಭಾರದ್ವಾಜಮತಮೃಚೀಕತನಯೈಃ ಪ್ರಾಪ್ತಂ ವಸಿಷ್ಠಾತ್ ಪುನಃ।
ಸಾವಿತ್ರೀಮಧಿಗಮ್ಯ ಶಕ್ರವಸುಭಿಃ ಕೃತ್ಸ್ನಾ ಜಿತಾ ದಾನವಾಃ॥
ಯೋ ಗೋಶತಂ ಕನಕಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ।
ದಿವ್ಯಾಂ ಚ ಭಾರತಕಥಾಂ ಕಥಯೇಚ್ಚ ನಿತ್ಯಂ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ॥
ಧರ್ಮೋ ವಿವರ್ಧತಿ ಭೃಗೋಃ ಪರಿಕೀರ್ತನೇನ
ವೀರ್ಯಂ ವಿವರ್ಧತಿ ವಸಿಷ್ಠನಮೋನತೇನ।
ಸಂಗ್ರಾಮಜಿದ್ಭವತಿ ಚೈವ ರಘುಂ ನಮಸ್ಯನ್

**ಮಾಂಗಲ್ಯಾದಿಶುಭಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇ-**
**ದ್ಧರ್ಮಾರ್ಥಾದಿಸಮಸ್ತವಾಂಛಿತಫಲಂ ಪ್ರಾಪ್ನೋತ್ಯಸೌ ಮಾನವಃ ॥**

**॥ ಇತಿ ಶ್ರೀರಾಜರಾಜೇಶ್ವರಯತಿಕೃತ ಮಂಗಲಾಷ್ಟಕಮ್ ॥**

ಪದಚ್ಛೇದ: ಇತಿ, ಏತತ್, ವರಮಂಗಲಾಷ್ಟಕಮ್, ಇದಮ್, ಶ್ರೀರಾಜರಾಜೇಶ್ವರೈಃ, ಆಖ್ಯಾತಮ್, ಜಗತಾಮ್, ಅಭೀಷ್ಟಫಲದಮ್, ಸರ್ವಾಶುಭಧ್ವಂಸನಮ್, ಮಾಂಗಲ್ಯಾದಿಶುಭಕ್ರಿಯಾಸು, ಸತತಮ್, ಸಂಧ್ಯಾಸು, ವಾ, ಯಃ, ಪಠೇತ್, ಧರ್ಮಾರ್ಥಾದಿಸಮಸ್ತವಾಂಛಿತಫಲಂ, ಪ್ರಾಪ್ನೋತಿ, ಅಸೌ, ಮಾನವಃ.

**ಅನು: ಈ ರೀತಿಯಾದ ಶ್ರೇಷ್ಠವಾದ ಮಂಗಲಾಷ್ಟಕವು ಶ್ರೀರಾಜ-ರಾಜೇಶ್ವರರಿಂದ ಹೇಳಲ್ಪಟ್ಟಿತು; ಇದು ಲೋಕಗಳಿಗೆ ಬಯಸಿದ ಫಲವನ್ನು ನೀಡುವಂತಹುದು; ಸಕಲ ಅನಿಷ್ಟಗಳನ್ನು ಪರಿಹಾರ ಮಾಡುವಂತಹುದು; ಇದನ್ನು ವಿವಾಹ ಮೊದಲಾದ ಮಂಗಲಕಾರ್ಯಗಳಲ್ಲಿ, ಸಂಧ್ಯಾಕಾಲಗಳಲ್ಲಿ ಸಹ ಯಾವನು ಸತತ ಪಠಿಸುವನೋ ಅಂತಹ ಮಾನವನು ಧರ್ಮ, ಅರ್ಥ ಮೊದಲಾದ ಬಯಸಿದ ಸಕಲ ಫಲಗಳನ್ನು ಪಡೆದುಕೊಳ್ಳುವನು.**

ವಿ. ೧: ಎಂಟು ಶ್ಲೋಕಗಳಲ್ಲಿ ಶ್ರೀಹರಿಯಿಂದ ಪ್ರಾರಂಭಿಸಿ ಸಕಲ ದೇವತೆಗಳು, ಋಷಿಗಳು, ಪರ್ವತಗಳು, ರಾಜರು, ನದಿಗಳು, ಶಾಸ್ತ್ರಗಳು, ನವಗ್ರಹ ಮೊದಲಾದ ಸಕಲ ಪದಾರ್ಥಗಳು ಮೊದಲಾದವುಗಳನ್ನು ಮಂಗಲ ನೀಡಲಿ ಎಂದು ಪ್ರಾರ್ಥಿಸಿಕೊಂಡು ಈ ಶ್ಲೋಕದಲ್ಲಿ ಇಂತಹ ಮಂಗಲಾಷ್ಟಕವನ್ನು ಪಠಿಸುವುದರಿಂದ ಲಭಿಸುವ ಫಲವನ್ನು ತಿಳಿಸಿರುವರು; ಎಂದರೆ ಇದು ಮಂಗಲಾಷ್ಟಕದ ಫಲಶ್ರುತಿ ಎಂದರ್ಥ.

---

ಸ್ಯಾದಶ್ವಿನೌ ಚ ಪರಿಕೀರ್ತಯತೋ ನ ರೋಗಃ ॥
ಏಷಾ ತೇ ಕಥಿತಾ ರಾಜನ್ ಸಾವಿತ್ರೀ ಬ್ರಹ್ಮ ಶಾಶ್ವತೀ ।
ವಿವಕ್ಷುರಸಿ ಯಚ್ಚಾನ್ಯತ್ ತತ್ ತೇ ವಕ್ಷ್ಯಾಮಿ ಭಾರತ ॥ - ಮಹಾಭಾರತ (ಅ.ಪ/೧೫೦/೫೫-೮೨)
ಅಯಂ ದೈವತವಂಶೋ ವೈ ಋಷಿವಂಶಸಮನ್ವಿತಃ ।
ತ್ರಿಸಂಧ್ಯಂ ಪಠಿತಃ ಪುತ್ರ ಕಲ್ಮಷಾಪಹರಃ ಪರಃ ॥
ಯದಹ್ನಾ ಕುರುತೇ ಪಾಪಮಿಂದ್ರಿಯೈಃ ಪುರುಷಶ್ಚರನ್ ।
ಬುದ್ಧಿಪೂರ್ವಮಬುದ್ಧಿರ್ವಾ ರಾತ್ರೌ ಯಚ್ಚಾಪಿ ಸಂಧ್ಯಯೋಃ ॥
ಮುಚ್ಯತೇ ಸರ್ವಪಾಪೇಭ್ಯಃ ಕೀರ್ತಯನ್ ವೈ ಶುಚಿಃ ಸದಾ ।
ನಾಂಧೋ ನ ಬಧಿರಃ ಕಾಲೇ ಕುರುತೇ ಸ್ವಸ್ತಿಮಾನ್ ಸದಾ ॥
ತಿರ್ಯಗ್ಯೋನಿಂ ನ ಗಚ್ಛೇಚ್ಚ ನರಕಂ ಸಂಕರಾಣಿ ಚ ।
ನ ಚ ದುಃಖಭಯಂ ತಸ್ಯ ಮರಣೇ ಸ ನ ಮುಹ್ಯತಿ ॥ - ಮಹಾಭಾರತ (ಅ.ಪ/೧೬೫/೪-೭)

೨. '**ವರಮಂಗಲಾಷ್ಟಕಂ**' ಎಂಬುದಾಗಿ ಇದನ್ನು ಶ್ರೇಷ್ಠವಾದ ಮಂಗಲಾಷ್ಟಕ ಎಂದು ಕರೆಯುವ ಮೂಲಕ ಇದರಲ್ಲಿ ಪೂಜ್ಯವಾದ ಸಮಸ್ತ ವಸ್ತುಗಳ ಉಲ್ಲೇಖ ತಾರತಮ್ಯ ಇತ್ಯಾದಿ ವೈಷ್ಣವಕ್ರಮದಲ್ಲಿ ಯಥೋಚಿತವಾಗಿ ಬಂದಿರುವುದರಿಂದ ಇದು ಶ್ರೇಷ್ಠ ಎಂಬುದನ್ನು ತಿಳಿಯಪಡಿಸಿರುವರು ಎಂದು ತಿಳಿಯಬೇಕು

೩. ಮಂಗಲ ಎಂಬುದಕ್ಕೆ ವಿಷ್ಣು ಎಂದರ್ಥ: 'ಪವಿತ್ರಂ ಮಂಗಲಂ ಪರಮ್' (ಶ್ರೀವಿಷ್ಣುಸಹಸ್ರನಾಮ); 'ಮಂಗಲಾನಾಂ ಚ ಮಂಗಲಮ್'. ಇದರಿಂದ ಮಂಗಲಾಷ್ಟಕ ಎಂದರೆ ವಿಷ್ಣ್ವಷ್ಟಕ ಎಂದೂ ಅರ್ಥವಾಗುವುದು. ಮಹಾಲಕ್ಷ್ಮಿ ಎಂಬ ಅಕ್ಷರಪುರುಷಳ ಪತಿ, ಜೀವೋತ್ತಮರಾದ ಬ್ರಹ್ಮದೇವರ ಜನಕ, ಗರುಡ, ಶೇಷ, ರುದ್ರರು ಕ್ರಮವಾಗಿ ಇವನಿಗೆ ವಾಹನ, ಹಾಸಿಗೆ ಹಾಗೂ ತೀರ್ಥಧರರು ಆಗಿರುವರು. ಬ್ರಹ್ಮಾಂಡವೇ ಅವನ ಹಿರಿದಾದ ಮಂದಿರ; ಸಕಲ ಸುರರ ಗುಂಪುಗಳು ಇವನಿಗೆ ಪ್ರತಿಬಿಂಬರು. ಸಪತ್ನೀಕರಾದ ಬ್ರಹ್ಮಾದಿ ಸಕಲ ಸುರಶ್ರೇಷ್ಠರು ಇವನಿಗೆ ಕಿಂಕರರು. ವಿಶ್ವಾಮಿತ್ರ ಮೊದಲಾದ ಋಷಿಗಳು ಸದಾ ಇವನ ಪಾದವನ್ನೇ ಧ್ಯಾನಿಸುವವರು. ಮಾಂಧಾತೃ ಮೊದಲಾದ ಸಕಲ ರಾಜರು ಇವನ ಆವೇಶದಿಂದಾಗಿ ಭೂಪಾಲರೆನ್ನಿಸಿದವರು. ಮೇರು ಮೊದಲಾದ ಮಹಾಪರ್ವತಗಳು ವಿಷ್ಣುವಿನ ವಿಭೂತಿರೂಪದಿಂದ ಹಿರಿಮೆಯನ್ನು ಪಡೆದಿವೆ. ಗಂಗಾ ಮೊದಲಾದ ಮಹಾನದಿಗಳು ಇವನ ಪಾದಕಮಲದಿಂದ ಜನ್ಮ ತಾಳಿವೆ. ವೇದಾದಿ ಸಕಲಶಾಸ್ತ್ರಗಳೂ ಸಹ ಇವನ ಗುಣರಾಶಿಗಳನ್ನು ಹಾಡಿಹೊಗಳುತ್ತಿವೆ. ಆದಿತ್ಯಾದಿ ಸಕಲ ಗ್ರಹಗಳು ಇವನ ಅನುಗ್ರಹದಿಂದಲೇ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿವೆ. ಹೀಗೆ ಸಕಲ ರೀತಿಯಿಂದಲೂ ಸಹ ಸಕಲರಿಗೂ ಶ್ರೀಹರಿಯೇ ಸರ್ವಪ್ರವರ್ತಕನಾದ, ಸರ್ವಸ್ವಾಮಿಯಾಗಿರುವುದರಿಂದ ಅವನೇ ಸರ್ವೋತ್ತಮ ಎಂಬುದನ್ನು ತುಂಬಾ ಸರಳವಾಗಿ, ಸ್ಪಷ್ಟವಾಗಿ ತಿಳಿಸುವುದರಿಂದ ಇದು 'ವರ' ಶ್ರೇಷ್ಠವೆನ್ನಿಸಿರುವ 'ಮಂಗಲಾಷ್ಟಕ' ಎಂದು ಇದರ ಭಾವ.

೪. ಇದು '**ರಾಜರಾಜೇಶ್ವರ**' ಎಂಬ ಯತಿವರೇಣ್ಯರಿಂದ ರಚಿತವಾದ ಅಷ್ಟಕ ಎಂಬುದಾಗಿ ಇದರಲ್ಲಿ ಇದನ್ನು ರಚಿಸಿದವರ ಹೆಸರು ಉಲ್ಲೇಖವಾಗಿದೆ. ಕೆಲವು ಲಿಖಿತಪ್ರತಿಗಳಲ್ಲೂ ಹಾಗು ಮುದ್ರಿತಪ್ರತಿಗಳಲ್ಲೂ ಶ್ರೀವಾದಿರಾಜೇಶ್ವರೈಃ ಎಂಬ ಪಾಠ ಉಂಟು. ಆದರೆ, ಹೆಚ್ಚಿನ ಪ್ರತಿಗಳಲ್ಲಿ ರಾಜರಾಜೇಶ್ವರ ಎಂಬ ಹೆಸರೇ ಇರುವುದರಿಂದಲೂ, ಉಡುಪಿ ಪ್ರಾಂತದಲ್ಲಿ ಶ್ರೀರಾಜರಾಜೇಶ್ವರ ಕೃತ ಎಂಬುದಾಗಿಯೇ ಪಠಿಸುವ ಸಂಪ್ರದಾಯವಿರುವುದರಿಂದಲೂ, 'ಶ್ರೀರಾಜರಾಜೇಶ್ವರೈಃ' ಎಂಬ ಪಾಠವೇ ಹೆಚ್ಚು ಸಮುಚಿತ ಎಂದು ತಿಳಿಯುವುದು.

೫. ಇದು ಜಗತ್ತಿಗೆ ಅಭೀಷ್ಟ ನೀಡುವ ಅಷ್ಟಕ ಎನ್ನುವ ಮೂಲಕ ಇದರ ವ್ಯಾಪ್ತಿ ತುಂಬಾ ವಿಶಾಲವಾದುದು ಎಂದರ್ಥ. ನಾಡಗೀತೆ, ರಾಷ್ಟ್ರಗೀತೆಗಳು ಆಯಾ ನಾಡಿಗೆ ಹಾಗೂ ರಾಷ್ಟ್ರಗಳಿಗೆ ಮಾತ್ರ ಸೀಮಿತವಾದರೆ, ಈ ಮಂಗಲಾಷ್ಟಕವು ಸಕಲ ಲೋಕಗಳಿಗೂ ಮಾನ್ಯವೆನ್ನಿಸುವಂತಹ ವಿಶ್ವಗೀತೆಯಾಗಿದೆ ಎಂಬ ವಿಶೇಷಾಂಶ ಸೂಚಿತವಾಗುವುದು.

೬. '**ಇಷ್ಟಾರ್ಥ**' ಎರಡು ಬಗೆಯದು. ಒದಗಿದ ಅನಿಷ್ಟದ ಪರಿಹಾರ ಒಂದು ಬಗೆಯದಾದರೆ, ಬಯಸಿದ ಇಷ್ಟ ವಸ್ತುವಿನ ಪ್ರಾಪ್ತಿ ಇನ್ನೊಂದು ಬಗೆಯದು. ಕೆಲವು ಸಾಧನಗಳಿಗೆ ಅನಿಷ್ಟ ಪರಿಹಾರ ಮಾಡುವ ಸಾಮರ್ಥ್ಯ ಮಾತ್ರ ಇರುವುದು. ರೋಗಿಯ ರೋಗವನ್ನು ಮಾತ್ರ ಪರಿಹಾರ ಮಾಡುವ ವೈದ್ಯ, ಕೇವಲ ಅನಿಷ್ಟವನ್ನು ಮಾತ್ರ ಪರಿಹರಿಸಿದಂತೆ. ಕೆಲವು ಸಾಧನಗಳಿಂದ ಇಷ್ಟ ಪ್ರಾಪ್ತಿ ಮಾತ್ರ ಲಭಿಸುವುದು; ಮರಗಳಿಂದ ಹಣ್ಣು ಲಭಿಸುವಂತೆ, ಆದರೆ ಅವುಗಳಿಂದ ನಮ್ಮಲ್ಲಿನ ರೋಗಾದಿ ಅನಿಷ್ಟಗಳು ಪರಿಹಾರವಾಗಲಾರವು. ಆದರೆ, ಈ ಮಂಗಲಾಷ್ಟಕವು ಇವೆರಡರಲ್ಲಿ ಒಂದನ್ನು ಮಾತ್ರ ನೀಡದೇ, ಎರಡನ್ನೂ ನೀಡುವ ಅಪೂರ್ವ ಕೃತಿ ಎಂದು ತಿಳಿಸುವ ಮೂಲಕ ಅನಿಷ್ಟ ನಿವಾರಣೆ ಬಯಸುವ ಹಾಗೂ ಇಷ್ಟಪ್ರಾಪ್ತಿಯನ್ನು ಬಯಸುವ ಸಕಲರು ಇದನ್ನು ಪಠಿಸಿ ಶ್ರೇಯಸ್ಸನ್ನು ಪಡೆಯಬೇಕು ಎಂದು ಆಶಯ.

೭. ಕೆಲವು ವಸ್ತುಗಳಿಗೆ ಕೆಲವು ಇಷ್ಟಗಳನ್ನು ಮಾತ್ರ ನಿಡುವ ಶಕ್ತಿ ಇದ್ದರೆ, ಮತ್ತೆ ಕೆಲವು ವಸ್ತುಗಳಿಗೆ ಕೆಲವು ಅನಿಷ್ಟಗಳನ್ನು ಪರಿಹರಿಸುವ ಶಕ್ತಿ ಮಾತ್ರ ಇರುವುದು. ಆದರೆ, ಈ ಮಂಗಲಾಷ್ಟಕವು ಸಕಲ ಅಭೀಷ್ಟಗಳನ್ನು ನೀಡುವ, ಸಕಲ ಅನಿಷ್ಟಗಳನ್ನು ಪರಿಹರಿಸುವ ಅಪೂರ್ವಕೃತಿಯಾಗಿದೆ ಎಂಬುದನ್ನು ಸರ್ವಾಶುಭಧ್ವಂಸನಮ್ ಎಂಬ ಪದದಿಂದ ತಿಳಿಸಿರುವರು.

೮. ಇಲ್ಲಿಯ '**ಸರ್ವಾಶುಭಧ್ವಂಸನಮ್**' ಎಂಬಲ್ಲಿನ ಸರ್ವ ಶಬ್ದವನ್ನು ಅಭೀಷ್ಟಫಲದಂ ಎಂಬ ಪದದೊಂದಿಗೂ ಸೇರಿಸಿಕೊಂಡು ಸರ್ವಾಭೀಷ್ಟಫಲದಂ ಎಂದು ಅರ್ಥಮಾಡಿಕೊಳ್ಳಬೇಕು.

೯. '**ಮಂಗಲಾಷ್ಟಕ**' ಎಂಬ ಹೆಸರಿಗೆ ತಕ್ಕಂತೆ ಇದನ್ನು ವಿವಾಹ ಮಂಗಲಾದಿ ಶುಭಕಾರ್ಯಗಳಲ್ಲಿ ತಪ್ಪದೇ ಪಠಿಸಬೇಕು ಎಂದು ತಿಳಿಸಿರುವರು. ಇಂದಿಗೂ ವೈಷ್ಣವರಲ್ಲಿ, ಸಂಪ್ರದಾಯಸ್ಥರಲ್ಲಿ, ವಿವಾಹ ಮಂಗಲಕಾರ್ಯಾದಿಗಳಲ್ಲಿ ಇದನ್ನು ತಪ್ಪದೇ ಪಠಿಸುವ ಪರಿಪಾಠ ಉಂಟು.

೧೦. '**ಮಾಂಗಲ್ಯಾದಿಶುಭಕ್ರಿಯಾಸು**' ಮಂಗಲಕಾರ್ಯಗಳಲ್ಲಿ ಹೇಗೋ ಹಾಗೆ, ಸಂಧ್ಯಾವಂದನೆ ಮೊದಲಾದ ನಿತ್ಯ ಕರ್ಮಗಳ ಸಮಯದಲ್ಲೂ ಇದು ಪಠನೆಗೆ ಯೋಗ್ಯ ಎಂದು ತಿಳಿಸಿರುವರು. ಸಂಧ್ಯಾಸು ಎಂದ ಪದದಿಂದ ಮೂರೂ ಸಂಧ್ಯಾಕಾಲಗಳಲ್ಲಿ ಎಂಬ ಅರ್ಥ ಲಭಿಸುವುದು. ಇದರಿಂದ ಸಂಧ್ಯಾವಂದನೆಯ ಸಮಯದಲ್ಲೂ ಸಹ ಇದು ಪಠನೆಗೆ ಯೋಗ್ಯವಾದ ಕೃತಿ ಎಂದು ತಿಳಿಯುವುದು. ಮಾಂಗಲ್ಯಾದಿ ಎಂಬಲ್ಲಿನ ಆದಿ ಶಬ್ದದಿಂದ ಉಪನಯನ ಮೊದಲಾದ ಇತರ ಶುಭಸಂಸ್ಕಾರಗಳಲ್ಲಿ ಎಂಬ ಅರ್ಥ ಸೂಚಿತ.

೧೧. ಇಲ್ಲಿಯ '**ಸಂಧ್ಯಾಸು**' ಎಂಬ ಬಹುವಚನ ಪದದಿಂದ ಸಂಧ್ಯಾವಂದನೆ-ಪ್ರಾತಃ ಸಂಧ್ಯಾ, ಸಾಯಂ ಸಂಧ್ಯಾ ಎಂದು ಎರಡು ಕಾಲದಲ್ಲಿ ಮಾತ್ರವಲ್ಲದೇ ಮೂರು ಸಂಧ್ಯಾಕಾಲಗಳಲ್ಲೂ ಕರ್ತವ್ಯ ಎಂಬ ವಿಶೇಷಾಂಶ ತಿಳಿಯುವುದು. ಶ್ರೀವಾದಿರಾಜಸ್ವಾಮಿಗಳ ಆಹ್ನಿಕ ಪದ್ಧತಿಯಲ್ಲಿ ಈ ವಿವರ ಸ್ಪಷ್ಟವಾಗಿ ಬಂದಿದೆ. ಭವಿಷ್ಯೋತ್ತರಪುರಾಣ ವೇಂಕಟೇಶಕಲ್ಯಾಣದಲ್ಲಿ ಶ್ರೀಶುಕಮುನಿಗಳು 'ಕೃತ್ವಾ ಮಾಧ್ಯಾಹ್ನಿಕೀಂ ಸಂಧ್ಯಾಮ್' ಎಂಬುದಾಗಿ ಮಧ್ಯಾಹ್ನದ ಸಂಧ್ಯಾವಂದನೆಯನ್ನು ಪೂರೈಸಿದ ವಿವರ ಬಂದಿರುವುದು ಇದಕ್ಕೆ ಮತ್ತೊಂದು ಮುಖ್ಯವಾದ ಗಮಕ. ತ್ರಿಕಾಲೇ ಗೀಯತೇ ಯತಃ ಎಂಬುದಾಗಿ ಶ್ರೀಮದಾಚಾರ್ಯರು ಉಲ್ಲೇಖಿಸಿರುವ ಪ್ರಮಾಣವಚನದಿಂದ ಗಾಯತ್ರೀ ಎಂಬ ಪದದಲ್ಲಿಯೇ ಅದು ಮೂರು ಸಂಧ್ಯಾಕಾಲಗಳಲ್ಲಿ ಜಪಿಸಬೇಕಾದ ಮಂತ್ರ ಎಂಬ ಅರ್ಥ ಸೂಚಿತ ಎಂಬ ವಿಶೇಷಾಂಶ ತಿಳಿಯುವುದು.

೧೨. '**ಧರ್ಮಾರ್ಥಾದಿಸಮಸ್ತವಾಂಛಿತಫಲಂ**' ಎನ್ನುವ ಮೂಲಕ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಿಗೂ ಇದು ಯಥೋಚಿತವಾಗಿ ಸಾಧಕ ಎಂಬ ಅಂಶ ಸೂಚಿತ; ಧರ್ಮ, ಅರ್ಥಗಳನ್ನೇ ಮೊದಲಾಗಿ ಹೊಂದಿರುವ ಮುಖ್ಯವಾದ ಪುರುಷಾರ್ಥ ಎಂದರೆ ಮೋಕ್ಷ ಎಂದರ್ಥ. ಧರ್ಮ, ಅರ್ಥ ಹಾಗೂ ಕಾಮ ಈ ಮೂರು ಸಹ ತ್ರಿವರ್ಗ ಎನ್ನಿಸಿದರೆ, ಮೋಕ್ಷವು ಅಪವರ್ಗ ಎನ್ನಿಸಿದೆ. ಧರ್ಮಾರ್ಥಾದಿಗಳು ವಾಂಛಿತವಾಗುವುದು ಅವು ಮೋಕ್ಷ ಸಂಪಾದನೆಗೆ ಅನುಕೂಲಿಸುವಂತಿದ್ದಾಗ ಮಾತ್ರ ಎಂಬ ವಿಶೇಷಾಂಶವು '**ವಾಂಛಿತಫಲಂ**' ಎಂಬುದರಿಂದ ಸೂಚಿತ.

೧೩. '**ಮಾನವಃ**' ಎಂಬ ಪದದಲ್ಲಿ ಮನೋಃರಯಂ ಮಾನವಃ ಎಂಬ ವ್ಯುತ್ಪತ್ತಿಯಿಂದ ಜ್ಞಾನಿಯಾದವನು ಎಂಬ ಅರ್ಥ ಲಭಿಸುವುದು. ಮನು ಅವಬೋಧನೆ ಎಂಬುದಾಗಿಯೇ ಧಾತ್ವರ್ಥವಿದೆ. ಮನು ಎಂಬುದಕ್ಕೆ ವಾಯು ಎಂಬ ಅರ್ಥವೂ

ಉಪನಿಷತ್ತುಗಳಲ್ಲಿ ಪ್ರಸಿದ್ಧವಾದುದು: ವಾಯವೇ ಮನವೇ. ಅದರಂತೆ, ಎಂಬುದಕ್ಕೆ ಸರ್ವಜ್ಞನಾದ ಮಹಾವಿಷ್ಣು ಎಂಬ ಅರ್ಥವೂ ಇದೆ: ಹ್ಯಾಚಾರಾನುವಾಚೇಶಃ ಪ್ರೇರಯನ್ ಮನುಮಾನಸಮ್. ಶ್ರೀಹರಿವಾ ಭಕ್ತನಾದವನೇ ಇದನ್ನು ಪಠಿಸಲು ಮುಖ್ಯವಾಗಿ ಅರ್ಹನು ಎಂಬ ವಿಶೇಷಾಂಶ ಸೂ

೧೪. ಗರುಡಪುರಾಣದ ಬ್ರಹ್ಮಕಾಂಡದಲ್ಲಿ ಸ್ಮರಣೆಗೆ ವಿಹಿತವಾಗಿರುವ ವ ವಿವರಗಳನ್ನು ಒದಗಿಸುವ ಶ್ಲೋಕವನ್ನು ಸಹ ಇದರಲ್ಲಿ ಅಳವಡಿಸಿಕೊಳ್ಳಬೇಕು:

ಅಶ್ವತ್ಥಸ್ಯ ವನಾನಿ ಯಾನಿ ತುಲಸೀಧಾತ್ರೀವನಾನಿ ಪ್ರಭೋ
ಪುನ್ನಾಗಸ್ಯ ವನಾನಿ ಚಂಪಕವನಾನ್ಯನ್ಯಾನಿ ಪುಷ್ಪಾಣಿ ಚ ।
ಮಂದಾರಸ್ಯ ವನಾನಿ ಯಾನಿ ಚ ಹರೇಃ ಸೌಗಂಧಿಕಾನ್ಯಪ್ಯಹೋ
ನಿತ್ಯಂ ತಾನಿ ದಿಶಂತು ಪ್ರಭಾತಮತುಲಂ ಶ್ರೀವೇಂಕಟೇಶ ಪ್ರಭೋ ॥
– ಗರುಡಪುರಾಣ (ಬ್ರಹ್ಮಕಾಂಡ-೨೬

೧೫. ಹೀಗೆ ಈ ಮಂಗಲಾಷ್ಟಕವು ಸಕಲ ವೈಷ್ಣವರಿಗೂ ಸಹ ನಿತ್ಯಪಠ ಅಪೂರ್ವವಾದ ಕೃತಿಯಾಗಿದೆ ಎಂಬ ವಿಶೇಷಾಂಶ ತಿಳಿಯುವುದು.

*****

## ॥ ಶ್ರೀಕೃಷ್ಣಾರ್ಪಣಮಸ್ತು ॥

**ಸಮರ್ಪಿತಂ ಮಯಾ ಭವೇತ್ ಸುಮಧ್ವನುತ್ತವಾಣಿನಾ ।**
**ರಮಾರಮೇಶಪಾದಯೋಃ ಪ್ರಭಂಜನಾಭಿಧಾಯುಜಾ ॥**

*****

# [1]ಮಂಗಲಾಷ್ಟಕದ ಆಕರಗಳು

## ೧. ಸಾವಿತ್ರ್ಯುಪಾಖ್ಯಾನಮ್

### ಯುಧಿಷ್ಠಿರ ಉವಾಚ

ಪಿತಾಮಹ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ ।
ಕಿಂ ಜಪ್ಯಂ ಜಪತೋ ನಿತ್ಯಂ ಭವೇದ್ಧರ್ಮಫಲಂ ಮಹತ್ ॥ ೧ ॥

ಪ್ರಸ್ಥಾನೇ ವಾ ಪ್ರವೇಶೇ ವಾ ಪ್ರವೃತ್ತೇ ವಾಽಪಿ ಕರ್ಮಣಿ ।
ದೈವೇ ವಾ ಶ್ರಾದ್ಧಕಾಲೇ ವಾ ಕಿಂ ಜಪ್ಯಂ ಕರ್ಮಸಾಧನಮ್ ॥ ೨ ॥

ಶಾಂತಿಕಂ ಪೌಷ್ಟಿಕಂ ರಕ್ಷಾ ಶತ್ರುಘ್ನಂ ಭಯನಾಶನಮ್ ।
ಜಪ್ಯಂ ಯದ್ಬ್ರಹ್ಮಸಮಿತಂ ತದ್ಭವಾನ್ ವಕ್ತುಮರ್ಹತಿ ॥ ೩ ॥

### ಭೀಷ್ಮ ಉವಾಚ

ವ್ಯಾಸಪ್ರೋಕ್ತಮಿಮಂ ಮಂತ್ರಂ ಶೃಣುಷ್ವೇಕಮನಾ ನೃಪ ।
ಸಾವಿತ್ರ್ಯಾ ವಿಹಿತಂ ದಿವ್ಯಂ ಸದ್ಯಃ ಪಾಪವಿಮೋಚನಮ್ ॥ ೪ ॥

ಶೃಣು ಮಂತ್ರವಿಧಿಂ ಕೃತ್ಸ್ನಂ ಪ್ರೋಚ್ಯಮಾನಂ ಮಯಾಽನಘ ।
ಯಂ ಶ್ರುತ್ವಾ ಪಾಂಡವಶ್ರೇಷ್ಠ ಸರ್ವಪಾಪೈಃ ಪ್ರಮುಚ್ಯತೇ ॥ ೫ ॥

ರಾತ್ರಾವಹನಿ ಧರ್ಮಜ್ಞ ಜಪನ್ ಪಾಪೈರ್ನ ಲಿಪ್ಯತೇ ।
ತತ್ ತೇಽಹಂ ಸಂಪ್ರವಕ್ಷ್ಯಾಮಿ ಶೃಣುಷ್ವೈಕಮನಾ ನೃಪ ॥ ೬ ॥

ಆಯುಷ್ಮಾನ್ ಭವತೇ ಚೈವ ಯಂ ಶ್ರುತ್ವಾ ಪಾರ್ಥಿವಾತ್ಮಜ ।
ಪುರುಷಸ್ತು ಸುಸಿದ್ಧಾರ್ಥಃ ಪ್ರೇತ್ಯ ಚೇಹ ಚ ಮೋದತೇ ॥ ೭ ॥

ಸೇವಿತಂ ಸತತಂ ರಾಜನ್ ಪುರಾ ರಾಜರ್ಷಿಸತ್ತಮೈಃ ।
ಕ್ಷತ್ರಧರ್ಮಪರೈರ್ನಿತ್ಯಂ ಸತ್ಯವ್ರತಪರಾಯಣೈಃ ॥ ೮ ॥

ಇದಮಾಹ್ನಿಕಮವ್ಯಗ್ರ ಕುರ್ವದ್ಭಿರ್ನಿಯತೈಃ ಸದಾ ।
ನೃಪೈರ್ಭರತಶಾರ್ದೂಲ ಪ್ರಾಪ್ಯತೇ ಶ್ರೀರನುತ್ತಮಾ ॥ ೯ ॥

---

೧. ಶ್ರೀರಾಜರಾಜೇಶ್ವರಯತಿಗಳ ಮಂಗಲಾಷ್ಟಕಕ್ಕೆ ಮುಖ್ಯ ಆಕರವೆನ್ನಿಸುವ ಭಾಗ ಶ್ರೀಮಹಾಭಾರತದ ಅನುಶಾಸನಪರ್ವದಲ್ಲಿ ದೊರೆಯುವುದು. ಇಲ್ಲಿ ಕೊಡಲಾಗಿರುವ ಎರಡು ಪ್ರಸಂಗಗಳು ನೇರವಾಗಿ ಈ ಮಂಗಲಾಷ್ಟಕದ ಎಲ್ಲ ವಿವರಗಳಿಗೂ ಮೂಲವೆನ್ನಿಸುವುದರಿಂದ, ಇವುಗಳ ಅವಲೋಕನ ಅದರ ಅಧ್ಯಯನಕ್ಕೆ ಪೂರಕವೆನ್ನಿಸುವುದು.

ನಮೋ ವಸಿಷ್ಠಾಯ ಮಹಾವ್ರತಾಯ
ಪರಾಶರಂ ವೇದನಿಧಿಂ ನಮಸ್ಯೇ ।
ನಮೋಽಸ್ತ್ವನಂತಾಯ ಮಹೋರಗಾಯ
ನಮೋಽಸ್ತು ಸಿದ್ಧೇಭ್ಯ ಇಹಾಕ್ಷಯೇಭ್ಯಃ ॥ ೧೦ ॥

ನಮೋಽಸ್ತ್ವೃಷಿಭ್ಯಃ ಪರಮಂ ಪರೇಷಾಂ
ದೇವೇಷು ದೇವಂ ವರದಂ ವರಾಣಾಮ್ ।
ಸಹಸ್ರಶೀರ್ಷಾಯ ನಮಃ ಶಿವಾಯ
ಸಹಸ್ರನಾಮಾಯ ಜನಾರ್ದನಾಯ ॥ ೧೧ ॥

ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚಾಪರಾಜಿತಃ ।
ಋತಶ್ಚ ಪಿತೃರೂಪಶ್ಚ ತ್ರ್ಯಂಬಕಶ್ಚ ಮಹೇಶ್ವರಃ ॥ ೧೨ ॥

ವೃಷಾಕಪಿಶ್ಚ ಶಂಭುಶ್ಚ ಹವನೋಽಥೇಶ್ವರಸ್ತಥಾ ।
ಏಕಾದಶೈತೇ ಪ್ರಥಿತಾ ರುದ್ರಾಸ್ತ್ರಿಭುನೇಶ್ವರಾಃ ॥ ೧೩ ॥

ಶತಮೇತತ್ ಸಮಾಮ್ನಾತಂ ಶತರುದ್ರೇ ಮಹಾತ್ಮನಾಮ್ ।
ಅಂಶೋ ಭಗಶ್ಚ ಮಿತ್ರಶ್ಚ ವರುಣಶ್ಚ ಜಲೇಶ್ವರಃ ॥ ೧೪ ॥

ತಥಾ ಧಾತಾಽರ್ಯಮಾ ಚೈವ ಜಯಂತೋ ಭಾಸ್ಕರಸ್ತಥಾ ।
ತ್ವಷ್ಟಾ ಪೂಷಾ ತಥೈವೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ॥ ೧೫ ॥

ಇತ್ಯೇತೇ ದ್ವಾದಶಾದಿತ್ಯಾಃ ಕಾಶ್ಯಪೇಯಾ ಇತಿ ಶ್ರುತಿಃ ।
ಧರೋ ಧ್ರುವಶ್ಚ ಸೋಮಶ್ಚ ಸಾವಿತ್ರೋಽಥಾನಿಲೋಽನಲಃ ॥ ೧೬ ॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ನಾಸತ್ಯಶ್ಚಾಪಿ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಪಿ ॥ ೧೭ ॥

ಮಾರ್ತಂಡಸ್ಯಾತ್ಮಜಾವೇತೌ ಸಂಜ್ಞಾನಾಸಾವಿನಿರ್ಗತೌ ।
ಅತಃ ಪರಂ ಪ್ರವಕ್ಷ್ಯಾಮಿ ಲೋಕಾನಾಂ ಕರ್ಮಸಾಕ್ಷಿಣಃ ॥ ೧೮ ॥

ಅಪಿ ಯಜ್ಞಸ್ಯ ವೇತ್ತಾರೋ ದತ್ತಸ್ಯ ಸುಕೃತಸ್ಯ ಚ ।
ಅದೃಶ್ಯಾಃ ಸರ್ವಭೂತೇಷು ಪಶ್ಯಂತಿ ತ್ರಿದಶೇಶ್ವರಾಃ ॥ ೧೯ ॥

ಶುಭಾಶುಭಾನಿ ಕರ್ಮಾಣಿ ಮೃತ್ಯುಃ ಕಾಲಶ್ಚ ಸರ್ವಶಃ ।
ವಿಶ್ವೇದೇವಾಃ ಪಿತೃಗಣಾ ಮೂರ್ತಿಮಂತಸ್ತಪೋಧನಾಃ ॥ ೨೦ ॥

ಮುನಯಶ್ಚೈವ ಸಿದ್ಧಾಶ್ಚ ತಪೋಮೋಕ್ಷಪರಾಯಣಾಃ ।
ಶುಚಿಸ್ಮಿತಾಃ ಕೀರ್ತಯತಾಂ ಪ್ರಯಚ್ಛಂತಿ ಶುಭಂ ನೃಣಾಮ್ ॥ ೨೧ ॥

ಪ್ರಜಾಪತಿಕೃತಾನೇತಾನ್ ಲೋಕಾನ್ ದಿವ್ಯೇನ ತೇಜಸಾ ।
ವಸಂತಿ ಸರ್ವಲೋಕೇಷು ಪ್ರಯತಾಃ ಸರ್ವಕರ್ಮಸು ॥ ೨೨ ॥

ಪ್ರಾಣಾನಾಮೀಶ್ವರಾನೇತಾನ್ ಕೀರ್ತಯನ್ ಪ್ರಯತೋ ನರಃ ।
ಧರ್ಮಾರ್ಥಕಾಮ್ಯೈರ್ವಿಪುಲೈರ್ಯುಜ್ಯತೇ ಸಹ ನಿತ್ಯಶಃ ॥ ೨೩ ॥

ಲೋಕಾಂಶ್ಚ ಲಭತೇ ಪುಣ್ಯಾನ್ ವಿಶ್ವೇಶ್ವರಕೃತಾನ್ ಶುಭಾನ್ ।
ಏತೇ ದೇವಾಸ್ತ್ರಯಸ್ತ್ರಿಂಶತ್ ಸರ್ವಭೂತಗಣೇಶ್ವರಾಃ ॥ ೨೪ ॥

ನಂದೀಶ್ವರೋ ಮಹಾಕಾಯೋ ಗ್ರಾಮಣೀರ್ವೃಷಭಧ್ವಜಃ ।
ಈಶ್ವರಾಃ ಸರ್ವಲೋಕಾನಾಂ ಗಣೇಶ್ವರವಿನಾಯಕಾಃ ॥ ೨೫ ॥

ಸೌಮ್ಯಾ ರೌದ್ರಾ ಗಣಾಶ್ಚೈವ ಯೋಗಭೂತಗಣಾಸ್ತಥಾ ।
ಜ್ಯೋತೀಂಷಿ ಸರಿತೋ ವ್ಯೋಮ ಸುಪರ್ಣಃ ಪತಗೇಶ್ವರಃ ॥ ೨೬ ॥

ಪೃಥಿವ್ಯಾಂ ತಪಸಾ ಸಿದ್ಧಾಃ ಸ್ಥಾವರಾಶ್ಚ ಚರಾಶ್ಚ ಹ ।
ಹಿಮವಾನ್ ಗಿರಯಃ ಸರ್ವೇ ಚತ್ವಾರಶ್ಚ ಮಹಾರ್ಣವಾಃ ॥ ೨೭ ॥

ಭವಸ್ಯಾನುಚರಾಶ್ಚೈವ ಹರತುಲ್ಯಪರಾಕ್ರಮಾಃ ।
ವಿಷ್ಣುರ್ದೇವೋಽಥ ಜಿಷ್ಣುಶ್ಚ ಸ್ಕಂದಶ್ಚಾಂಬಿಕಯಾ ಸಹ ॥ ೨೮ ॥

ಕೀರ್ತಯನ್ ಪ್ರಯತಃ ಸರ್ವಾನ್ ಸರ್ವಪಾಪೈಃ ಪ್ರಮುಚ್ಯತೇ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಮಾನವಾನ್ ಋಷಿಸತ್ತಮಾನ್ ॥ ೨೯ ॥

ಯವಕ್ರೀತಶ್ಚ ರೈಭ್ಯಶ್ಚ ಅರ್ವಾವಸುಪರಾವಸೂ ।
ಔಶಿಜಶ್ಚೈವ ಕಕ್ಷೀವಾನ್ ಬಲಶ್ಚಾಂಗಿರಸಃ ಸುತಃ ॥ ೩೦ ॥

ಋಷಿರ್ಮೇಧಾತಿಥೇಃ ಪುತ್ರಃ ಕಣ್ವೋ ಬರ್ಹಿಷದಸ್ತಥಾ ।
ಬ್ರಹ್ಮತೇಜೋಮಯಾಃ ಸರ್ವೇ ಕೀರ್ತಿತಾ ಲೋಕಭಾವನಾಃ ॥ ೩೧ ॥

ಲಭಂತೇ ಹಿ ಶುಭಂ ಸರ್ವೇ ರುದ್ರಾನಲವಸುಪ್ರಭಾಃ ।
ಭುವಿ ಕೃತ್ವಾ ಶುಭಂ ಕರ್ಮ ಮೋದಂತೇ ದಿವಿ ದೈವತೈಃ ॥ ೩೨ ॥

ಮಹೇಂದ್ರಗುರವಃ ಸಪ್ತ ಪ್ರಾಚೀಂ ವೈ ದಿಶಮಾಶ್ರಿತಾಃ ।
ಪ್ರಯತಃ ಕಿರ್ತಯೇದೇತಾನ್ ಶಕ್ರಲೋಕೇ ಮಹೀಯತೇ ॥ ೩೩ ॥

ಉನ್ಮುಚುಃ ಪ್ರಮುಚುಶ್ಚೈವ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್ ।
ದೃಢವ್ಯಶ್ಚೋರ್ಧ್ವಬಾಹುಶ್ಚ ತೃಣಸೋಮಾಂಗಿರಾಸ್ತಥಾ ॥ ೩೪ ॥

ಮಿತ್ರಾವರುಣಯೋಃ ಪುತ್ರಸ್ತಥಾಽಗಸ್ತ್ಯಃ ಪ್ರತಾಪವಾನ್ ।
ಧರ್ಮರಾಜರ್ತ್ವಿಜಃ ಸಪ್ತ ದಕ್ಷಿಣಾಂ ದಿಶಮಾಶ್ರಿತಾಃ ॥ ೩೫ ॥

ದೃಢೇಯುಶ್ಚ ಋತೇಯುಶ್ಚ ಪರಿವ್ಯಾಧಶ್ಚ ಕೀರ್ತಿಮಾನ್ ।
ಏಕತಶ್ಚ ದ್ವಿತಶ್ಚೈವ ತ್ರಿತಶ್ಚಾದಿತ್ಯಸನ್ನಿಭಾಃ ॥ ೩೬ ॥

ಅತ್ರೇಃ ಪುತ್ರಶ್ಚ ಧರ್ಮಾತ್ಮಾ ಋಷಿಃ ಸಾರಸ್ವತಸ್ತಥಾ ।
ವರುಣಸ್ಯರ್ತ್ವಿಜಃ ಸಪ್ತ ಪಶ್ಚಿಮಾಂ ದಿಶಮಾಶ್ರಿತಾಃ ॥ ೩೭ ॥

ಅತ್ರಿರ್ವಸಿಷ್ಠೋ ಭಗವಾನ್ ಕಶ್ಯಪಶ್ಚ ಮಹಾನ್ ಋಷಿಃ ।
ಗೌತಮಶ್ಚ ಭರದ್ವಾಜೋ ವಿಶ್ವಾಮಿತ್ರೋಽಥ ಕೌಶಿಕಃ ॥ ೩೮ ॥

ಋಚೀಕತನಯಶ್ಚೋಗ್ರೋ ಜಮದಗ್ನಿಃ ಪ್ರತಾಪವಾನ್ ।
ಧನೇಶ್ವರಸ್ಯ ಗುರವಃ ಸಪ್ತೈತೇ ಉತ್ತರಾಶ್ರಿತಾಃ ॥ ೩೯ ॥

ಅಪರೇ ಮುನಯಃ ಸಪ್ತ ದಿಕ್ಷು ಸರ್ವಾಸ್ವಧಿಷ್ಠಿತಾಃ ।
ಕೀರ್ತಿಸ್ವಸ್ತಿಕರಾ ನೄಣಾಂ ಕೀರ್ತಿತಾ ಲೋಕಭಾವನಾಃ ॥ ೪೦ ॥

ಧರ್ಮಃ ಕಾಮಶ್ಚ ಕಾಲಶ್ಚ ವಸುರ್ವಾಸುಕಿರೇವ ಚ ।
ಅನಂತಃ ಕಪಿಲಶ್ಚೈವ ಸಪ್ತೈತೇ ಧರಣೀಧರಾಃ ॥ ೪೧ ॥

ರಾಮೋ ವ್ಯಾಸಸ್ತಥಾ ದ್ರೌಣಿರಶ್ವತ್ಥಾಮಾ ಚ ಲೋಮಶಃ ।
ಇತ್ಯೇತೇ ಮುನಯೋ ದಿವ್ಯಾ ಏಕೈಕಃ ಸಪ್ತ ಸಪ್ತಧಾ ॥ ೪೨ ॥

ಶಾಂತಿಸ್ವಸ್ತಿಕರಾ ಲೋಕೇ ದಿಶಾಂಪಾಲಾಃ ಪ್ರಕೀರ್ತಿತಾಃ ।
ಯಸ್ಯಾಂ ಯಸ್ಯಾಂ ದಿಶಿ ಹ್ಯೇತೇ ತನ್ಮುಖಃ ಶರಣಂ ವ್ರಜೇತ್ ॥ ೪೩ ॥

ಸ್ರಷ್ಟಾರಃ ಸರ್ವಭೂತಾನಾಂ ಕೀರ್ತಿತಾ ಲೋಕಪಾವನಾಃ ।
ಸಂವರ್ತೋ ಮೇರುಸಾವರ್ಣೋ ಮಾರ್ಕಂಡೇಯಶ್ಚ ಧಾರ್ಮಿಕಃ ॥ ೪೪ ॥

ಸಾಂಖ್ಯಯೋಗೌ ನಾರದಶ್ಚ ದುರ್ವಾಸಶ್ಚ ಮಹಾನ್ ಋಷಿಃ ।
ಅತ್ಯಂತತಪಸೋ ದಾಂತಾಸ್ತ್ರಿಷು ಲೋಕೇಷು ವಿಶ್ರುತಾಃ ॥ ೪೫ ॥

ಅಪರೇ ರುದ್ರಸಂಕಾಶಾಃ ಕೀರ್ತಿತಾ ಬ್ರಹ್ಮಲೌಕಿಕಾಃ ।
ಅಪುತ್ರೋ ಲಭತೇ ಪುತ್ರಂ ದರಿದ್ರೋ ಲಭತೇ ಧನಮ್ ॥ ೪೬ ॥

ತಥಾ ಧರ್ಮಾರ್ಥಕಾಮೇಷು ಸಿದ್ಧಿಂ ಚ ಲಭತೇ ನರಃ ।
ಪೃಥುಂ ವೈನ್ಯಂ ನೃಪವರಂ ಪೃಥ್ವೀ ಯಸ್ಯಾಭವತ್ ಸುತಾ ॥ ೪೭ ॥

ಪ್ರಜಾಪತಿಂ ಸಾರ್ವಭೌಮಂ ಕೀರ್ತಯೇದ್ವಸುಧಾಧಿಪಮ್ ।
ಆದಿತ್ಯವಂಶಪ್ರಭವಂ ಮಹೇಂದ್ರಸಮವಿಕ್ರಮಮ್ ॥ ೪೮ ॥

ಪುರೂರವಸಮೈಲಂ ಚ ತ್ರಿಷು ಲೋಕೇಷು ವಿಶ್ರುತಮ್ ।
ಬುಧಸ್ಯ ದಯಿತಂ ಪುತ್ರಂ ಕೀರ್ತಯೇದ್ವಸುಧಾಧಿಪಮ್ ॥ ೪೯ ॥

ತ್ರಿಲೋಕವಿಶ್ರುತಂ ವೀರಂ ಭರತಂ ಚ ಪ್ರಕೀರ್ತಯೇತ್ ।
ಗವಾಮಯೇನ ಯಜ್ಞೇನ ಯೇನೇಷ್ಟಂ ವೈ ಕೃತೇ ಯುಗೇ ॥ ೫೦ ॥

ರಂತಿದೇವಂ ಮಹಾದೇವಂ ಕೀರ್ತಯೇತ್ ಪರಮದ್ಯುತಿಮ್ ।
ವಿಶ್ವಜಿತ್ತಪಸೋಪೇತಂ ಲಕ್ಷಣ್ಯಂ ಲೋಕಪೂಜಿತಮ್ ॥ ೫೧ ॥

ಯಥಾ ಶ್ವೇತಂ ಚ ರಾಜರ್ಷಿಂ ಕೀರ್ತಯೇತ್ ಪರಮದ್ಯುತಿಮ್ ।
ಸಗರಸ್ಯಾತ್ಮಜಾ ಯೇನ ಪ್ಲಾವಿತಾಸ್ತಾರಿತಾಸ್ತಥಾ ॥ ೫೨ ॥

ಹುತಾಶನಸಮಾನೇತಾನ್ ಮಹಾರೂಪಾನ್ ಮಹೌಜಸಃ ।
ಉಗ್ರಕಾಯಾನ್ ಮಹಾಸತ್ತ್ವಾನ್ ಕೀರ್ತಯೇತ್ ಕೀರ್ತಿವರ್ಧನಾನ್॥ ೫೩ ॥

ದೇವಾನ್ ಋಷಿಗಣಾಂಶ್ಚೈವ ನೃಪಾಂಶ್ಚ ಜಗತೀಶ್ವರಾನ್ ।
ಸಾಂಖ್ಯಂ ಯೋಗಂ ಚ ಪರಮಂ ಹವ್ಯಂ ಕವ್ಯಂ ತಥೈವ ಚ ॥ ೫೪ ॥

ಕೀರ್ತಿತಂ ಪರಮಂ ಬ್ರಹ್ಮ ಸರ್ವಶ್ರುತಿಪರಾಯಣಮ್ ।
ಮಂಗಲ್ಯಂ ಸರ್ವಭೂತಾನಾಂ ಪವಿತ್ರಂ ಬಹುಕೀರ್ತಿತಮ್ ॥ ೫೫ ॥

ವ್ಯಾಧಿಪ್ರಶಮನಂ ಶ್ರೇಷ್ಠಂ ಪೌಷ್ಟಿಕಂ ಸರ್ವಕರ್ಮಣಾಮ್ ।
ಪ್ರಯತಃ ಕೀರ್ತಯೇಚ್ಚೈತಾನ್ ಕಲ್ಯಂ ಸಾಯಂ ಚ ಭಾರತ ॥ ೫೬ ॥

ಏತೇ ವೈ ಪಾಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ಚ ।
ಏತೇ ವಿನಾಯಕಾಃ ಶ್ರೇಷ್ಠಾ ದಕ್ಷಾಃ ಶಾಂತಾ ಜಿತೇಂದ್ರಿಯಾಃ ॥ ೫೭ ॥

ನರಾಣಾಮಶುಭಂ ಸರ್ವೇ ವ್ಯಪೋಹಂತಿ ಪ್ರಕೀರ್ತಿತಾಃ ।
ಸಾಕ್ಷಿಭೂತಾ ಮಹಾತ್ಮಾನಃ ಪಾಪಸ್ಯ ಸುಕೃತಸ್ಯ ಚ ॥ ೫೮ ॥

ಏತಾನ್ ವೈ ಕಲ್ಯಮುತ್ಥಾಯ ಕೀರ್ತಯನ್ ಶುಭಮಶ್ನುತೇ ।
ನಾಗ್ನಿಚೌರಭಯಂ ತಸ್ಯ ನ ಮಾರ್ಗಪ್ರತಿರೋಧನಮ್ ॥ ೫೯ ॥

ಏತಾನ್ ಕೀರ್ತಯತಾಂ ನಿತ್ಯಂ ದುಃಸ್ವಪ್ನೋ ನಶ್ಯತೇ ನೃಣಾಮ್ ।
ಮುಚ್ಯತೇ ಸರ್ವಪಾಪೇಭ್ಯಃ ಸ್ವಸ್ತಿಮಾಂಶ್ಚ ಗೃಹಾನ್ ವ್ರಜೇತ್ ॥ ೬೦ ॥

ದೀಕ್ಷಾಕಾಲೇಷು ಸರ್ವೇಷು ಯಃ ಪಠೇನ್ನಿಯತೋ ದ್ವಿಜಃ ।
ನ್ಯಾಯವಾನಾತ್ಮನಿರತಃ ಕ್ಷಾಂತೋ ದಾಂತೋಽನಸೂಯಕಃ ॥ ೬೧ ॥

ರೋಗಾರ್ತೋ ವ್ಯಾಧಿಯುಕ್ತೋ ವಾ ಪಠನ್ ಪಾಪಾತ್ ಪ್ರಮುಚ್ಯತೇ ।
ವಾಸ್ತುಮಧ್ಯೇ ತು ಪಠತಃ ಕುಲೇ ಸ್ವಸ್ತ್ಯಯನಂ ಭವೇತ್ ॥ ೬೨ ॥

ಕ್ಷೇತ್ರಮಧ್ಯೇ ತು ಪಠತಃ ಸರ್ವಂ ಸಸ್ಯಂ ಪ್ರರೋಹತಿ ।
ಗಚ್ಛತಃ ಕ್ಷೇಮಮಧ್ವಾನಂ ಗ್ರಾಮಾಂತರಗತಃ ಪಠನ್ ॥ ೬೩ ॥

ಆತ್ಮನಶ್ಚ ಸುತಾನಾಂ ಚ ದಾರಾಣಾಂ ಚ ಧನಸ್ಯ ಚ ।
ಬೀಜಾನಾಮೋಷಧೀನಾಂ ಚ ರಕ್ಷಾಮೇತಾಂ ಪ್ರಯೋಜಯೇತ್ ॥ ೬೪ ॥

ಏತಾನ್ ಸಂಗ್ರಾಮಕಾಲೇ ತು ಪಠತಃ ಕ್ಷತ್ರಿಯಸ್ಯ ತು ।
ವ್ರಜಂತಿ ರಿಪವೋ ನಾಶಂ ಕ್ಷೇಮಂ ಚ ಪರಿವರ್ತತೇ ॥ ೬೫ ॥

ಏತಾನ್ ದೈವೇ ಚ ಪಿತ್ರ್ಯೇ ಚ ಪಠತಃ ಪುರುಷಸ್ಯ ಹಿ ।
ಭುಂಜತೇ ಪಿತರಃ ಕವ್ಯಂ ಹವ್ಯಂ ಚ ತ್ರಿದಿವೌಕಸಃ ॥ ೬೬ ॥

ನ ವ್ಯಾಧಿಶ್ಚಾಪದಭಯಂ ನ ದ್ವಿಪಾನ್ನ ಹಿ ತಸ್ಕರಾತ್ ।
ಕಶ್ಮಲಂ ಲಘುತಾಂ ಯಾತಿ ಪಾಪ್ಮನಾ ಚ ಪ್ರಮುಚ್ಯತೇ ॥ ೬೭ ॥

ಯಾನಪಾತ್ರೇ ಚ ಯಾನೇ ಚ ಪ್ರವಾಸೇ ರಾಜವೇಶ್ಮನಿ ।
ಪರಾಂ ಸಿದ್ಧಿಮವಾಪ್ನೋತಿ ಸಾವಿತ್ರೀಂ ಹ್ಯುತ್ತಮಾಂ ಪಠನ್ ॥ ೬೮ ॥

ನ ಚ ರಾಜಭಯಂ ತೇಷಾಂ ನ ಪಿಶಾಚಾನ್ನ ರಾಕ್ಷಸಾತ್ ।
ನಾಗ್ನ್ಯಂಬುಪವನವ್ಯಾಲಾದ್ಭಯಂ ತಸ್ಯೋಪಜಾಯತೇ ॥ ೬೯ ॥

ಚತುರ್ಣಾಮಪಿ ವರ್ಣಾನಾಮಾಶ್ರಮಸ್ಯ ವಿಶೇಷತಃ ।
ಕರೋತಿ ಸತತಂ ಶಾಂತಿಂ ಸಾವಿತ್ರೀಮುತ್ತಮಾಂ ಪಠನ್ ॥ ೭೦ ॥

ನಾಗ್ನಿರ್ದಹತಿ ಕಾಷ್ಠಾನಿ ಸಾವಿತ್ರೀ ಯತ್ರ ಪಠ್ಯತೇ ।
ನ ತತ್ರ ಬಾಲೋ ಮ್ರಿಯತೇ ನ ಚ ತಿಷ್ಠಂತಿ ಪನ್ನಗಾಃ ॥ ೭೧ ॥

ನ ತೇಷಾಂ ವಿದ್ಯತೇ ದುಃಖಂ ಗಚ್ಛಂತಿ ಪರಮಾಂ ಗತಿಮ್ ।
ಯೇ ಶೃಣ್ವಂತಿ ಮಹದ್ಬ್ರಹ್ಮ ಸಾವಿತ್ರೀಗುಣಕೀರ್ತನಮ್ ॥ ೭೨ ॥

ಗವಾಂ ಮಧ್ಯೇ ತು ಪಠತೋ ಗಾವೋಽಸ್ಯ ಬಹುವತ್ಸಲಾಃ ।
ಪ್ರಸ್ಥಾನೇ ವಾ ಪ್ರವಾಸೇ ವಾ ಸರ್ವಾವಸ್ಥಾಂ ಗತಃ ಪಠೇತ್ ॥ ೭೩ ॥

ಜಪತಾಂ ಜುಹ್ವತಾಂ ಚೈವ ನಿತ್ಯಂ ಚ ಪ್ರಯತಾತ್ಮನಾಮ್ ।
ಋಷೀಣಾಂ ಪರಮಂ ಜಪ್ಯಂ ಗುಹ್ಯಮೇತನ್ನರಾಧಿಪ ॥ ೭೪ ॥

ಯಾಥಾತಥ್ಯೇನ ಸಿದ್ಧಸ್ಯ ಇತಿಹಾಸಂ ಪುರಾತನಮ್ ।
ಪರಾಶರಮತಂ ದಿವ್ಯಂ ಶಕ್ರಾಯ ಕಥಿತಂ ಪುರಾ ॥ ೭೫ ॥

ತದೇತತ್ ತೇ ಸಮಾಖ್ಯಾತಂ ತಥ್ಯಂ ಬ್ರಹ್ಮ ಸನಾತನಮ್ ।
ಹೃದಯಂ ಸರ್ವಭೂತಾನಾಂ ಶ್ರುತಿರೇಷಾ ಸನಾತನೀ ॥ ೭೬ ॥

ಸೋಮಾದಿತ್ಯಾನ್ವಯಾಃ ಸರ್ವೇ ರಾಘವಾಃ ಕುರವಸ್ತಥಾ ।
ಪಠಂತಿ ಶುಚಯೋ ನಿತ್ಯಂ ಸಾವಿತ್ರೀಂ ಪ್ರಾಣಿನಾಂ ಗತಿಮ್ ॥ ೭೭ ॥

ಅಭ್ಯಾಶೇ ನಿತ್ಯಂ ದೇವಾನಾಂ ಸಪ್ತರ್ಷೀಣಾಂ ಧ್ರುವಸ್ಯ ಚ।
ಮೋಕ್ಷಣಂ ಸರ್ವಕೃಚ್ಛ್ರಾಣಾಂ ಮೋಚಯತ್ಯಶುಭಾತ್ ಸದಾ ॥ ೭೮ ॥

ವೃದ್ಧೈಃ ಕಾಶ್ಯಪಗೌತಮಪ್ರಭೃತಿಭಿರ್ಭೃಗ್ವಂಗಿರೋಽತ್ರ್ಯಾದಿಭಿಃ
ಶುಕ್ರಾಗಸ್ತ್ಯಬೃಹಸ್ಪತಿಪ್ರಭೃತಿಭಿರ್ಬ್ರಹ್ಮರ್ಷಿಭಿಃ ಸೇವಿತಮ್।
ಭಾರದ್ವಾಜಮತಮೃಚೀಕತನಯೈಃ ಪ್ರಾಪ್ತಂ ವಸಿಷ್ಠಾತ್ ಪುನಃ
ಸಾವಿತ್ರೀಮಧಿಗಮ್ಯ ಶಕ್ರವಸುಭಿಃ ಕೃತ್ಸ್ನಾ ಜಿತಾ ದಾನವಾಃ ॥ ೭೯ ॥

ಯೋ ಗೋಶತಂ ಕನಕಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ।
ದಿವ್ಯಾಂ ಚ ಭಾರತಕಥಾಂ ಕಥಯೇಚ್ಚ ನಿತ್ಯಂ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ ॥ ೮೦ ॥

ಧರ್ಮೋ ವಿವರ್ಧತಿ ಭೃಗೋಃ ಪರಿಕೀರ್ತನೇನ
ವೀರ್ಯಂ ವಿವರ್ಧತಿ ವಸಿಷ್ಠನಮೋನತೇನ।
ಸಂಗ್ರಾಮಜಿದ್ಭವತಿ ಚೈವ ರಘುಂ ನಮಸ್ಯನ್
ಸ್ಯಾದಶ್ವಿನೌ ಚ ಪರಿಕೀರ್ತಯತೋ ನ ರೋಗಃ ॥ ೮೧ ॥

ಏಷಾ ತೇ ಕಥಿತಾ ರಾಜನ್ ಸಾವಿತ್ರೀ ಬ್ರಹ್ಮ ಶಾಶ್ವತೀ।
ವಿವಕ್ಷುರಸಿ ಯಚ್ಚಾನ್ಯತ್ ತತ್ ತೇ ವಕ್ಷ್ಯಾಮಿ ಭಾರತ ॥ ೮೨ ॥

॥ ಇತಿ ಶ್ರೀಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ಸಾವಿತ್ರೀವ್ರತೋಪಾಖ್ಯಾನೇ ಪಂಚಾಶದಧಿಕಶತತಮೋಽಧ್ಯಾಯಃ ॥

*****

## ೨. ವಂಶಾನುಕೀರ್ತನಮ್

ವೈಶಂಪಾಯನ ಉವಾಚ

ಶರತಲ್ಪಗತಂ ಭೀಷ್ಮಂ ಪಾಂಡವೋಽಥ ಕುರೂದ್ವಹಃ।
ಯುಧಿಷ್ಠಿರೋ ಹಿತಂ ಪ್ರೇಪ್ಸುರಪೃಚ್ಛತ್ ಕಲ್ಮಷಾಪಹಮ್ ॥ ೧ ॥

ಯುಧಿಷ್ಠಿರ ಉವಾಚ

ಕಿಂ ಶ್ರೇಯಃ ಪುರುಷಸ್ಯೇಹ ಕಿಂ ಕುರ್ವನ್ ಸುಖಮೇಧತೇ।
ವಿಪಾಪ್ಮಾ ಸ ಭವೇತ್ ಕೇನ ಕಿಂ ವಾ ಕಲ್ಮಷನಾಶನಮ್ ॥ ೨ ॥

ವೈಶಂಪಾಯನ ಉವಾಚ

ತಸ್ಮೈ ಶುಶ್ರೂಷಮಾಣಾಯ ಭೂಯಃ ಶಾಂತನವಸ್ತದಾ ।
ದೈವಂ ವಂಶಂ ಯಥಾನ್ಯಾಯಮಾಚಷ್ಟ ಪುರುಷರ್ಷಭ ॥ ೩ ॥

ಭೀಷ್ಮ ಉವಾಚ

ಅಯಂ ದೈವತವಂಶೋ ವೈ ಋಷಿವಂಶಸಮನ್ವಿತಃ ।
ತ್ರಿಸಂಧ್ಯಂ ಪಠಿತಃ ಪುತ್ರ ಕಲ್ಮಷಾಪಹರಃ ಪರಃ ॥ ೪ ॥
ಯದಹ್ನಾ ಕುರುತೇ ಪಾಪಮಿಂದ್ರಿಯೈಃ ಪುರುಷಶ್ಚರನ್ ।
ಬುದ್ಧಿಪೂರ್ವಮಬುದ್ಧಿರ್ವಾ ರಾತ್ರೌ ಯಚ್ಚಾಪಿ ಸಂಧ್ಯಯೋಃ ॥ ೫ ॥
ಮುಚ್ಯತೇ ಸರ್ವಪಾಪೇಭ್ಯಃ ಕೀರ್ತಯನ್ ವೈ ಶುಚಿಃ ಸದಾ ।
ನಾಂಧೋ ನ ಬಧಿರಃ ಕಾಲೇ ಕುರುತೇ ಸ್ವಸ್ತಿಮಾನ್ ಸದಾ ॥ ೬ ॥
ತಿರ್ಯಗ್ಯೋನಿಂ ನ ಗಚ್ಛೇಚ್ಚ ನರಕಂ ಸಂಕರಾಣಿ ಚ ।
ನ ಚ ದುಃಖಭಯಂ ತಸ್ಯ ಮರಣೇ ಸ ನ ಮುಹ್ಯತಿ ॥ ೭ ॥
ದೇವಾಸುರಗುರುರ್ದೇವಃ ಸರ್ವಭೂತನಮಸ್ಕೃತಃ ।
ಅಚಿಂತ್ಯೋಽಥಾಪ್ಯನಿರ್ದೇಶ್ಯಃ ಸರ್ವಪ್ರಾಣೋ ಹ್ಯಯೋನಿಜಃ ॥ ೮ ॥
ಪಿತಾಮಹೋ ಜಗನ್ನಾಥಃ ಸಾವಿತ್ರೀ ಬ್ರಹ್ಮಣಃ ಸತೀ ।
ವೇದಭೂರಥ ಕರ್ತಾ ಚ ವಿಷ್ಣುರ್ನಾರಾಯಣಃ ಪ್ರಭುಃ ॥ ೯ ॥
ಉಮಾಪತಿರ್ವಿರೂಪಾಕ್ಷಃ ಸ್ಕಂದಃ ಸೇನಾಪತಿಸ್ತಥಾ ।
ವಿಶಾಖೋ ಹುತಭುಗ್ವಾಯುಶ್ಚಂದ್ರಸೂರ್ಯೌ ಪ್ರಭಾಕರೌ ॥ ೧೦ ॥
ಶಕ್ರಃ ಶಚೀಪತಿರ್ದೇವೋ ಯಮೋ ಧೂಮೋರ್ಣಯಾ ಸಹ ।
ವರುಣಃ ಸಹ ಗೌರ್ಯಾ ಚ ಸಹ ಋದ್ಧ್ಯಾ ಧನೇಶ್ವರಃ ॥ ೧೧ ॥
ಸೌಮ್ಯಾ ಗೌಃ ಸುರಭಿರ್ದೇವೀ ವಿಶ್ರವಾಶ್ಚ ಮಹಾನ್ ಋಷಿಃ ।
ಸಂಕಲ್ಪಃ ಸಾಗರೋ ಗಂಗಾ ಸ್ರವಂತ್ಯೋಽಥ ಮರುದ್ಗಣಃ ॥ ೧೨ ॥
ವಾಲಖಿಲ್ಯಾಸ್ತಪಃಸಿದ್ಧಾಃ ಕೃಷ್ಣದ್ವೈಪಾಯನಸ್ತಥಾ ।
ನಾರದಃ ಪರ್ವತಶ್ಚೈವ ವಿಶ್ವಾವಸುರ್ಹಹಾಹುಹೂಃ ॥ ೧೩ ॥
ತುಂಬುರುಶ್ಚಿತ್ರಸೇನಶ್ಚ ದೇವದೂತಶ್ಚ ವಿಶ್ರುತಃ ।
ದೇವಕನ್ಯಾ ಮಹಾಭಾಗಾ ದಿವ್ಯಾಶ್ಚಾಪ್ಸರಸಾಂ ಗಣಾಃ ॥ ೧೪ ॥
ಉರ್ವಶೀ ಮೇನಕಾ ರಂಭಾ ಮಿಶ್ರಕೇಶೀ ಹ್ಯಲಂಬುಷಾ ।
ವಿಶ್ವಾಚೀ ಚ ಘೃತಾಚೀ ಚ ಪಂಚಚೂಡಾ ತಿಲೋತ್ತಮಾ ॥ ೧೫ ॥
ಆದಿತ್ಯಾ ವಸವೋ ರುದ್ರಾಃ ಸಾಶ್ವಿನಃ ಪಿತರೋಽಪಿ ಚ ।
ಧರ್ಮಃ ಶ್ರುತಂ ತಪೋ ದೀಕ್ಷಾ ವ್ಯವಸಾಯಃ ಪಿತಾಮಹಃ ॥ ೧೬ ॥

ಶರ್ವರ್ಯೋ ದಿವಸಾಶ್ಚೈವ ಮಾರೀಚಃ ಕಶ್ಯಪಸ್ತಥಾ ।
ಶುಕ್ರೋ ಬೃಹಸ್ಪತಿರ್ಭೌಮೋ ಬುಧೋ ರಾಹುಃ ಶನೈಶ್ಚರಃ ॥ ೧೭ ॥
ನಕ್ಷತ್ರಾಣ್ಯೃತವಶ್ಚೈವ ಮಾಸಾಃ ಪಕ್ಷಾಃ ಸವತ್ಸರಾಃ ।
ವೈನತೇಯಾಃ ಸಮುದ್ರಾಶ್ಚ ಕದ್ರುಜಾಃ ಪನ್ನಗಾಸ್ತಥಾ ॥ ೧೮ ॥
ಶತದ್ರುಶ್ಚ ವಿಪಾಶಾ ಚ ಚಂದ್ರಭಾಗಾ ಸರಸ್ವತೀ ।
ಸಿಂಧುಶ್ಚ ದೇವಿಕಾ ಚೈವ ಪ್ರಭಾಸಂ ಪುಷ್ಕರಾಣಿ ಚ ॥ ೧೯ ॥
ಗಂಗಾ ಮಹಾನದೀ ವೇಣಾ ಕಾವೇರೀ ನರ್ಮದಾ ತಥಾ ।
ಕುಲಂಪುನಾ ವಿಶಲ್ಯಾ ಚ ಕರತೋಯಾಽಂಬುವಾಹಿನೀ ॥ ೨೦ ॥
ಸರಯೂರ್ಗಂಡಕೀ ಚೈವ ಲೋಹಿತಶ್ಚ ಮಹಾನದಃ ।
ತಾಮ್ರಾರುಣಾ ವೇತ್ರವತೀ ಪರ್ಣಾಶಾ ಗೌತಮೀ ತಥಾ ॥ ೨೧ ॥
ಗೋದಾವರೀ ಚ ವೇಣ್ಯಾ ಚ ಕೃಷ್ಣವೇಣಾ ತಥಾಽದ್ರಿಜಾ ।
ದೃಷದ್ವತೀ ಚ ಕಾವೇರೀ ಚಕ್ಷುರ್ಮಂದಾಕಿನೀ ತಥಾ ॥ ೨೨ ॥
ಪ್ರಯಾಗಂ ಚ ಪ್ರಭಾಸಂ ಚ ಪುಣ್ಯಂ ನೈಮಿಷಮೇವ ಚ ।
ತಚ್ಚ ವಿಶ್ವೇಶ್ವರಸ್ಥಾನಂ ಯತ್ರ ತದ್ವಿಮಲಂ ಸರಃ ॥ ೨೩ ॥
ಪುಣ್ಯತೀರ್ಥೇ ಸುಸಲಿಲಂ ಕುರುಕ್ಷೇತ್ರಂ ಪ್ರಕೀರ್ತಿತಮ್ ।
ಸಿಂಧೂತ್ತಮಂ ತಪೋದಾನಂ ಜಂಬೂಮಾರ್ಗಮಥಾಪಿ ಚ ॥ ೨೪ ॥
ಹಿರಣ್ವತೀ ವಿತಸ್ತಾ ಚ ತಥಾ ಪ್ಲಕ್ಷವತೀ ನದೀ ।
ವೇದಸ್ಮೃತಿರ್ವೇದವತೀ ಮಾಲವಾಥಾಶ್ವವತ್ಯಪಿ ॥ ೨೫ ॥
ಭೂಮಿಭಾಗಾಸ್ತಥಾ ಪುಣ್ಯಾ ಗಂಗಾದ್ವಾರಮಥಾಪಿ ಚ ।
ಋಷಿಕುಲ್ಯಾಸ್ತಥಾ ಮೇಧ್ಯಾ ನದ್ಯಃ ಸಿಂಧುವಹಾಸ್ತಥಾ ॥ ೨೬ ॥
ಚರ್ಮಣ್ವತೀ ನದೀ ಪುಣ್ಯಾ ಕೌಶಿಕೀ ಯಮುನಾ ತಥಾ ।
ನದೀ ಬೀಮರಥೀ ಚೈವ ಬಾಹುದಾ ಚ ಮಹಾನದೀ ॥ ೨೭ ॥
ಮಾಹೇಂದ್ರವಾಣೀ ತ್ರಿದಿವಾ ನೀಲಿಕಾ ಚ ಸರಸ್ವತೀ ।
ನಂದಾ ಚಾಪರನಂದಾ ಚ ತಥಾ ತೀರ್ಥಮಹಾಹ್ರದಃ ॥ ೨೮ ॥
ಗಯಾಥ ಫಲ್ಗುತೀರ್ಥಂ ಚ ಧರ್ಮಾರಣ್ಯಂ ಸುರೈರ್ವೃತಮ್ ।
ತಥಾ ದೇವನದೀ ಪುಣ್ಯಾ ಸರಶ್ಚ ಬ್ರಹ್ಮನಿರ್ಮಿತಮ್ ॥ ೨೯ ॥
ಪುಣ್ಯಂ ತ್ರಿಲೋಕವಿಖ್ಯಾತಂ ಸರ್ವಪಾಪಹರಂ ಶಿವಮ್ ।
ಹಿಮವಾನ್ ಪರ್ವತಶ್ಚೈವ ದಿವ್ಯೌಷಧಿಸಮನ್ವಿತಃ ।
ಮೇರುರ್ಮಹೇಂದ್ರೋ ಮಲಯಃ ಶ್ವೇತಶ್ಚ ರಜತಾವೃತಃ ॥ ೩೦ ॥

ಶೃಂಗವಾನ್ ಮಂದರೋ ನೀಲೋ ನಿಷಧೋ ದರ್ದುರಸ್ತಥಾ ।
ಚಿತ್ರಕೂಟೋಽಜನಾಭಶ್ಚ ಪರ್ವತೋ ಗಂಧಮಾದನಃ ॥ ೩೨ ॥

ಪುಣ್ಯೋ ಸೋಮಗಿರಿಶ್ಚೈವ ತಥೈವಾನ್ಯೇ ಮಹೀಧರಾಃ ।
ದಿಶಶ್ಚ ವಿದಿಶಶ್ಚೈವ ಕ್ಷಿತಿಃ ಸರ್ವೇ ಮಹೀರುಹಾಃ ॥ ೩೩ ॥

ವಿಶ್ವೇದೇವಾ ನಭಶ್ಚೈವ ನಕ್ಷತ್ರಾಣಿ ಗ್ರಹಾಸ್ತಥಾ ।
ಪಾಂತು ನಃ ಸತತಂ ದೇವಾಃ ಕೀರ್ತಿತಾಽಕೀರ್ತಿತಾ ಮಯಾ ॥ ೩೪ ॥

ಕೀರ್ತಯಾನೋ ನರೋ ಹ್ಯೇತಾನ್ ಮುಚ್ಯತೇ ಸರ್ವಕಿಲ್ಬಿಷೈಃ ।
ಸ್ತುವಂಶ್ಚ ಪ್ರತಿನಂದಂಶ್ಚ ಮುಚ್ಯತೇ ಸರ್ವತೋ ಭಯಾತ್ ॥ ೩೫ ॥

ಸರ್ವಸಂಕರಪಾಪೇಭ್ಯೋ ದೇವತಾಸ್ತವನಂದಕಃ ।
ದೇವತಾನಂತರಂ ವಿಪ್ರಾಂಸ್ತಪಃಸಿದ್ಧಾಂಸ್ತಪೋಽಧಿಕಾನ್ ॥ ೩೬ ॥

ಕೀರ್ತಿತಾನ್ ಕೀರ್ತಯಿಷ್ಯಾಮಿ ಸರ್ವಪಾಪಪ್ರಮೋಚನಾನ್ ।
ಯವಕ್ರೀತೋಽಥ ರೈಭ್ಯಶ್ಚ ಕಕ್ಷೀವಾನೌಶಿಜಸ್ತಥಾ ॥ ೩೭ ॥

ಭೃಗ್ವಂಗಿರಾಸ್ತಥಾ ಕಣ್ವೋ ಮೇಧಾತಿಥಿರಥ ಪ್ರಭುಃ ।
ಬರ್ಹೀ ಚ ಗುಣಸಂಪನ್ನಃ ಪ್ರಾಚೀಂ ದಿಶಮುಪಾಶ್ರಿತಾಃ ॥ ೩೮ ॥

ಭದ್ರಾಂ ದಿಶಂ ಮಹಾಭಾಗಾ ಉಲ್ಮುಚುಃ ಪ್ರಮುಚುಸ್ತಥಾ ।
ಮುಮುಚುಶ್ಚ ಮಹಾಭಾಗಃ ಸ್ವಸ್ತ್ಯಾತ್ರೇಯಶ್ಚ ವೀರ್ಯವಾನ್ ॥ ೩೯ ॥

ಮಿತ್ರಾವರುಣಯೋಃ ಪುತ್ರಸ್ತಥಾಽಗಸ್ತ್ಯಃ ಪ್ರತಾಪವಾನ್ ।
ದೃಢಾಯುಶ್ಚೋರ್ಧ್ವಬಾಹುಶ್ಚ ವಿಶ್ರುತಾವೃಷಿಸತ್ತಮೌ ॥ ೪೦ ॥

ಪಶ್ಚಿಮಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್ ।
ಉಷಂಗುಃ ಸಹ ಸೋದರ್ಯೈಃ ಪರಿವ್ಯಾಧಶ್ಚ ವೀರ್ಯವಾನ್ ॥ ೪೧ ॥

ಋಷಿರ್ದೀರ್ಘತಮಾಶ್ಚೈವ ಗೌತಮಃ ಕಾಶ್ಯಪಸ್ತಥಾ ।
ಏಕತಶ್ಚ ದ್ವಿತಶ್ಚೈವ ತ್ರಿತಶ್ಚೈವ ಮಹಾನ್ ಋಷಿಃ ॥ ೪೨ ॥

ಅತ್ರೇಃ ಪುತ್ರಶ್ಚ ಧರ್ಮಾತ್ಮಾ ತಥಾ ಸಾರಸ್ವತಃ ಪ್ರಭುಃ ।
ಉತ್ತರಾಂ ದಿಶಮಾಶ್ರಿತ್ಯ ಯ ಏಧಂತೇ ನಿಬೋಧ ತಾನ್ ॥ ೪೩ ॥

ಅತ್ರಿರ್ವಸಿಷ್ಠಃ ಶಕ್ತಿಶ್ಚ ಪಾರಾಶರ್ಯಶ್ಚ ವೀರ್ಯವಾನ್ ।
ವಿಶ್ವಾಮಿತ್ರೋ ಭರದ್ವಾಜೋ ಜಮದಗ್ನಿಸ್ತಥೈವ ಚ ॥ ೪೪ ॥

ಋಚೀಕಪುತ್ರೋ ರಾಮಶ್ಚ ಋಷಿರೌದ್ದಾಲಕಿಸ್ತಥಾ ।
ಶ್ವೇತಕೇತುಃ ಕೋಹಲಶ್ಚ ವಿಪುಲೋ ದೇವಲಸ್ತಥಾ ॥ ೪೫ ॥

ದೇವಶರ್ಮಾ ಚ ಧೌಮ್ಯಶ್ಚ ಹಸ್ತಿಕಾಶ್ಯಪ ಏವ ಚ।
ಲೋಮಶೋ ನಾಚಿಕೇತಶ್ಚ ಲೋಮಹರ್ಷಣ ಏವ ಚ ॥ ४೬ ॥
ಋಷಿರುಗ್ರಶ್ರವಾಶ್ಚೈವ ಭಾರ್ಗವಶ್ಚ್ಯವನಸ್ತಥಾ।
ಏಷ ವೈ ಸಮವಾಯಶ್ಚ ಋಷಿದೇವಸಮನ್ವಿತಃ ॥ ४೭ ॥
ಆದ್ಯಃ ಪ್ರಕೀರ್ತಿತೋ ರಾಜನ್ ಸರ್ವಪಾಪಪ್ರಮೋಚನಃ।
ನೃಗೋ ಯಯಾತಿರ್ನಹುಷೋ ಯದುಃ ಪೂರುಶ್ಚ ವೀರ್ಯವಾನ್ ॥ ४೮ ॥
ಧುಂಧಮಾರೋ ದಿಲೀಪಶ್ಚ ಸಗರಶ್ಚ ಪ್ರತಾಪವಾನ್।
ಕೃಶಾಶ್ವೋ ಯೌವನಾಶ್ವಶ್ಚ ಚಿತ್ರಾಶ್ವಃ ಸತ್ಯವಾಂಸ್ತಥಾ ॥ ४೯ ॥
ದುಷ್ಯಂತೋ ಭರತಶ್ಚೈವ ತಥಾ ಚಕ್ರವರ್ತೀ ಮಹಾಯಶಾಃ।
ಪವನೋ ಜನಕಶ್ಚೈವ ತಥಾ ದೃಷ್ಟರಥೋ ನೃಪಃ ॥ ೫೦ ॥
ರಘುರ್ನರವರಶ್ಚೈವ ತಥಾ ದಶರಥೋ ನೃಪಃ।
ರಾಮೋ ರಾಕ್ಷಸಹಾ ವೀರಃ ಶಶಬಿಂದುರ್ಭಗೀರಥಃ ॥ ೫೧ ॥
ಹರಿಶ್ಚಂದ್ರೋ ಮರುತ್ತಶ್ಚ ತಥಾ ದೃಢರಥೋ ನೃಪಃ।
ಮಹೋದಯೋರ್ ಹ್ಯಲರ್ಕಶ್ಚ ಐಲಶ್ಚೈವ ನರಾಧಿಪಃ ॥ ೫೨ ॥
ಕರಂಧಮೋ ನರಶ್ರೇಷ್ಠಃ ಕಧ್ಮೋರಶ್ಚ ನರಾಧಿಪಃ।
ದಕ್ಷೋಽಂಬರೀಷಃ ಕುಕುರೋ ರೈವತಶ್ಚ ಮಹಾಯಶಾಃ ॥ ೫೩ ॥
ಕುರುಃ ಸಂವರಣಶ್ಚೈವ ಮಾಂಧಾತಾ ಸತ್ಯವಿಕ್ರಮಃ।
ಮುಚುಕುಂದಶ್ಚ ರಾಜರ್ಷಿರ್ಜಹ್ನುರ್ಜಾಹ್ನವಿಸೇವಿತಃ ॥ ೫४ ॥
ಆದಿರಾಜಃ ಪೃಥುರ್ವೈನ್ಯೋ ಮಿತ್ರಭಾನುಃ ಪ್ರಿಯಂಕರಃ।
ತ್ರಸದ್ದಸ್ಯುಸ್ತಥಾ ರಾಜಾ ಶ್ವೇತೋ ರಾಜರ್ಷಿಸತ್ತಮಃ ॥ ೫೫ ॥
ಮಹಾಭಿಷಶ್ಚ ವಿಖ್ಯಾತೋ ನಿಮಿರಾಜಾ ತಥಾಽಷ್ಟಕಃ।
ಆಯುಃ ಕ್ಷುಪಶ್ಚ ರಾಜರ್ಷಿಃ ಕಕ್ಷೇಯುಶ್ಚ ನರಾಧಿಪಃ ॥ ೫೬ ॥
ಪ್ರತರ್ದನೋ ದಿವೋದಾಸಃ ಸುದಾಸಃ ಕೋಸಲೇಶ್ವರಃ।
ಐಲೋ ನಲಶ್ಚ ರಾಜರ್ಷಿರ್ಮನುಶ್ಚೈವ ಪ್ರಜಾಪತಿಃ ॥ ೫೭ ॥
ಹವಿಧ್ರಶ್ಚ ಪೃಷಧ್ರಶ್ಚ ಪ್ರತೀಪಃ ಶಾಂತನುಸ್ತಥಾ।
ಅಜಃ ಪ್ರಾಚೀನಬರ್ಹಿಶ್ಚ ತಥೇಕ್ಷ್ವಾಕುರ್ಮಹಾಯಶಾಃ ॥ ೫೮ ॥
ಅನರಣ್ಯೋ ನರಪತಿರ್ಜಾನುಜಂಘಸ್ತಥೈವ ಚ।
ಕಕ್ಷಸೇನಶ್ಚ ರಾಜರ್ಷಿರ್ಯೇ ಚಾನ್ಯೇ ಚಾನುಕೀರ್ತಿತಾಃ ॥ ೫೯ ॥
ಕಲ್ಯಮುತ್ಥಾಯ ಯೋ ನಿತ್ಯಂ ಸಂಧ್ಯೇ ದ್ವೇಽಸ್ತಮಯೋದಯೇ।
ಪಠೇಚ್ಛುಚಿರನಾವೃತ್ತಃ ಸ ಧರ್ಮಫಲಭಾಗ್ ಭವೇತ್ ॥ ೬೦ ॥

ದೇವಾ ದೇವರ್ಷಯಶ್ಚೈವ ಸ್ತುತಾ ರಾಜರ್ಷಯಸ್ತಥಾ ।
ಪುಷ್ಟಿಮಾಯುರ್ಯಶಃ ಸ್ವರ್ಗಂ ವಿಧಾಸ್ಯಂತಿ ಮಮೇಶ್ವರಾಃ ॥ ೬೧ ॥

ಮಾ ವಿಘ್ನಂ ಮಾ ಚ ಮೇ ಪಾಪಂ ಮಾ ಚ ಮೇ ಪರಿಪಂಥಿನಃ ।
ಧ್ರುವೋ ಜಯೋ ಮೇ ನಿತ್ಯಃ ಸ್ಯಾತ್ ಪರತ್ರ ಚ ಶುಭಾ ಗತಿಃ ॥ ೬೨ ॥

॥ ಇತಿ ಶ್ರೀಮಹಾಭಾರತೇ ಅನುಶಾಸನಪರ್ವಣಿ ದಾನಧರ್ಮಪರ್ವಣಿ ವಂಶಾನುಕೀರ್ತನಂ ನಾಮ ಪಂಚಷ್ಷ್ಟ್ಯಧಿಕಶತತಮೋಽಧ್ಯಾಯಃ ॥

*****

## ೩. ದೇವತಾಸುಪ್ರಭಾತಸ್ತೋತ್ರಮ್

ಶ್ರೀವೇಂಕಟೇಶಸ್ತು ನೃಸಿಂಹಮೂರ್ತಿಃ
ಶ್ರೀವರದರಾಜಶ್ಚ ವರಾಹಮೂರ್ತಿಃ ।
ಶ್ರೀರಂಗರಾಜಸ್ತು ಹ್ಯನಂತಶಾಯೀ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೧ ॥

ಶ್ರೀಕೃಷ್ಣಮೂರ್ತಿಶ್ಚ ಗದಾಧರಶ್ಚ
ಶ್ರೀವಿಷ್ಣುಪಾದಸ್ತು ಪ್ರಯಾಗವಾಸಃ ।
ನಾರಾಯಣಃ ಶ್ರೀಬದರೀನಿವಾಸಃ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೨ ॥

ದಾಮೋದರೋ ವೈ ತ್ರಿಜಗನ್ನಿವಾಸಃ
ಶ್ರೀಪಾಂಡುರಂಗಶ್ಚ ನೃಸಿಂಹದೇವಃ ।
ಶ್ರೀರಾಮದೇವಶ್ಚ ಹ್ಯಯೋಧ್ಯವಾಸಃ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೩ ॥

ಶ್ರೀಧಮಪುತ್ರಶ್ಚ ನೃಸಿಂಹಮೂರ್ತಿಃ
ಶ್ರೀಪಿಪ್ಪಲಸ್ಥಃ ಮುಹಲ್ಲವಾಸಃ ।
ಕೋಲ್ಹಾನೃಸಿಂಹಃ ಶೂರ್ಪಕಾರಸ್ಥಸಿಂಹಃ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೪ ॥

ಚತುರ್ಮುಖಶ್ಚಾರುಸರಸ್ವತೀ ಚ
ಸುಭಾರತೀ ಶರ್ವಸುಪರ್ಣಶೇಷಾಃ ।
ಉಮಾ ಮಹೇಂದ್ರಶ್ಚ ಶಚೀಮುಖಾಸ್ತಾಃ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೫ ॥

ದ್ವಾರಾವತೀ ಕಾಶಿಕಾಽವಂತಿಕಾ ಚ
ಪ್ರಯಾಗಕಾಂಚ್ಯೌ ಮಥುರಾಪುರೀ ಚ।
ಮಾಯಾಪುರೀ ಹಸ್ತಿಪುರೀ ಪುರೀ ಚ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೬ ॥

ಭಾಗೀರಥೀ ಚೈವ ಸರಸ್ವತೀ ಚ
ಗೋದಾವರೀ ಸಿಂಧುಕೃಷ್ಣೇ ಚ ವೇಣೀ।
ಕಲಿಂದಕನ್ಯಾ ಯಮುನಾ ಚ ನರ್ಮದಾ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೭ ॥

ವಿತಸ್ತಿಕಾವೇರಿಸತುಂಗಭದ್ರಾಃ
ಸುವಂಜರಾ ಭೀಮರಥೀ ವಿಪಾಶಾ।
ಸುತಾಮ್ರಪರ್ಣೀ ಚ ಪಿನಾಕಿನೀ ಚ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೮ ॥

ಸ್ವಾಮಿಪುಷ್ಕರಣೀ ಚೈವ ಸುವರ್ಣಮುಖರೀ ತಥಾ।
ಶ್ರೀಪಾಂಡವೀ ತೌಂಬುರುಶ್ಚ ಕಪಿಲಾ ಪಾಪನಾಶಿನೀ ॥ ೯ ॥

ಗುರುರ್ವಸಿಷ್ಠಃ ಕ್ರತುರಂಗಿರಾಶ್ಚ
ಮನುಃ ಪುಲಸ್ತ್ಯಃ ಪುಲಹಶ್ಚ ಗೌತಮಃ।
ರೈಭ್ಯೋ ಮರೀಚಿಶ್ಚ್ಯವನಶ್ಚ ದಕ್ಷಃ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೧೦ ॥

ಸಪ್ತಾರ್ಣವಾಃ ಸಪ್ತಕುಲಾಚಲಾಶ್ಚ
ದ್ವೀಪಾಶ್ಚ ಸಪ್ತೋಪವನಾನಿ ಸಪ್ತ।
ಭೂರಾದಿಕಾನಿ ಭುವನಾನಿ ಸಪ್ತ
ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೧೧ ॥

ಮಾಂಧಾತಾ ನಹುಷೋಽಂಬರೀಷಸಗರೌ ರಾಜಾ ನಲೋ ಧರ್ಮರಾಟ್
ಪ್ರಹ್ಲಾದಃ ಕ್ರತುರಾಡ್ ವಿಭೀಷಣಗಯೌ ವ್ಯಾಸೋ ಹನೂಮಾನಪಿ।
ಅಶ್ವತ್ಥಾಮಕೃಪಾವುಮಾ ದ್ರುಪದಜಾ ಶ್ರೀಜಾನಕೀ ತಾರಕಾ
ಮಂದೋದರ್ಯಖಿಲಾಃ ಪ್ರಭಾತಸುಮಹಂ ಕುರ್ವಂತು ನಿತ್ಯಂ ಹರೇ ॥೧೨॥

ಅಶ್ವತ್ಥಸ್ಯ ವನಾನಿ ಯಾನಿ ತುಲಸೀಧಾತ್ರೀವನಾನಿ ಪ್ರಭೋ
ಪುನ್ನಾಗಸ್ಯ ವನಾನಿ ಚಂಪಕವನಾನ್ಯನ್ಯಾನಿ ಪುಷ್ಪಾಣಿ ಚ।

ಮಂದಾರಸ್ಯ ವನಾನಿ ಯಾನಿ ಚ ಹರೇಃ ಸೌಗಂಧಿಕಾನ್ಯಪ್ಯಹೋ
ನಿತ್ಯಂ ತಾನಿ ದಿಶಂತು ಪ್ರಭಾತಮತುಲಂ ಶ್ರೀವೇಂಕಟೇಶ ಪ್ರಭೋ ॥ ೧೩ ॥

ಏವಂ ಸ್ತುತ್ವಾ ಶ್ರೀನಿವಾಸಸ್ಯ ದೇವೀ
ಕೃತ್ವಾ ಶೌಚಂ ಜೈಗಿಷವ್ಯೇಣ ಸಾಕಮ್ ।
ಸ್ನಾತುಂ ಯಯೌ ಪುಷ್ಕರಿಣೀಂ ಹರೇಶ್ಚ
ಸ್ನಾನಂ ಸಮ್ಯಕ್ ತತ್ರ ಚಕಾರ ದೇವೀ ॥
ಸಮ್ಯಗ್ ಜಪ್ತ್ವಾ ವ್ಯಂಕಟೇಶಸ್ಯ ಮಂತ್ರ-
ಮುವಾಚ ಸಾ ಜೈಗಿಷವ್ಯಂ ಗುರುಂ ಚ ॥ ೧೪ ॥

॥ ಇತಿ ಶ್ರೀಗರುಡಪುರಾಣೇ ಬ್ರಹ್ಮಕಾಂಡೇ ಷಡ್ವಿಂಶೋಽಧ್ಯಾಯೇ ದೇವತಾಸುಪ್ರಭಾತಸ್ತೋತ್ರಮ್ ॥

*****

## ೪. ಪ್ರಭಾತಪಂಚಕಮ್

ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ ಭಾನುಃ ಶಶೀ ಭೂಮಿಸುತೋ ಬುಧಶ್ಚ ।
ಗುರುಶ್ಚ ಶುಕ್ರಃ ಸಹ ಭಾನುಜೇನ ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೧ ॥

ಭೃಗುರ್ವಸಿಷ್ಠಃ ಕ್ರತುರಂಗಿರಾಶ್ಚ ಮನುಃ ಪುಲಸ್ತ್ಯಃ ಪುಲಹಶ್ಚ ಗೌತಮಃ ।
ರೈಭ್ಯೋ ಮರೀಚಿಶ್ಚ್ಯವನೋ ಋಭುಶ್ಚ ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥೨॥

ಸನತ್ಕುಮಾರಃ ಸನಕಃ ಸನಂದನಃ ಸನಾತನೋಽಪ್ಯಾಸುರಿಪಿಂಗಲೌ ಚ ।
ಸಪ್ತಸ್ವರಾಃ ಸಪ್ತ ರಸಾತಳಾಶ್ಚ ಕುರ್ವಂತು ಸರ್ವೇ ಮಮ ಸುಪ್ರಭಾತಮ್ ॥ ೩ ॥

ಪೃಥ್ವೀ ಸಗಂಧಾ ಸರಸಾಸ್ತಥಾಽಽಪಃ ಸ್ಪರ್ಶಶ್ಚ ವಾಯುರ್ಜ್ವಲನಃ ಸತೇಜಾಃ ।
ನಭಃ ಸಶಬ್ದಂ ಮಹತಾ ಸಹೈವ ಯಚ್ಛಂತು ಸರ್ವೇ ಮಮ ಸುಪ್ರಭಾತಮ್ ॥ ೪ ॥

ಸಪ್ತಾರ್ಣವಾಃ ಸಪ್ತ ಕುಲಾಚಲಾಶ್ಚ ಸಪ್ತರ್ಷಯೋ ದ್ವೀಪವರಾಶ್ಚ ಸಪ್ತ ।
ಭೂರಾದಿ ಕೃತ್ವಾ ಭುನಾನಿ ಸಪ್ತ ದಿಶಂತು ಸರ್ವೇ ಮಮ ಸುಪ್ರಭಾತಮ್ ॥ ೫ ॥

ಇತ್ಥಂ ಪ್ರಭಾತೇ ಪರಮಂ ಪವಿತ್ರಂ ಪಠೇತ್ ಸ್ಮರೇದ್ವಾ ಶ್ರುಣುಯಾಚ್ಚ ಭಕ್ತ್ಯಾ ।
ದುಃಸ್ವಪ್ನನಾಶೋಽನಘ ಸುಪ್ರಭಾತಂ ಭವೇಚ್ಚ ಸತ್ಯಂ ಭಗವತ್ಪ್ರಸಾದಾತ್ ॥ ೬ ॥

॥ ಇತಿ ಶ್ರೀವಾಮನಪುರಾಣಾಂತರ್ಗತ ಪ್ರಭಾತಪಂಚಕಮ್ (೧೪/೨೩-೨೮) ॥

*****

# ಶ್ರೀಹರಿಗುರುಮಂಗಲಾಷ್ಟಕಗಳು

## ೧. ಶ್ರೀವೇಂಕಟೇಶಮಂಗಲಾಷ್ಟಕಮ್ - ೧

ಶ್ರೀಕ್ಷೋಣ್ಯೌ ರಮಣೀಯುಗಂ ಸುರಮಣೀಪುತ್ರೋಽಪಿ ವಾಣೀಪತಿಃ
ಪೌತ್ರಶ್ಚಂದ್ರಶಿರೋಮಣಿಃ ಫಣಿಪತಿಃ ಶಯ್ಯಾ ಸುರಾಃ ಸೇವಕಾಃ ।
ತಾರ್ಕ್ಷ್ಯೋ ಯಸ್ಯ ರಥೋ ಮಹಚ್ಚ ಭವನಂ ಬ್ರಹ್ಮಾಂಡಮಾದ್ಯಃ ಪುಮಾನ್
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರ್ಮಂಗಲಮ್ ॥ ೧ ॥

ಯತ್ತೇಜೋ ರವಿಕೋಟಿಕೋಟಿಕಿರಣಾನ್ ಧಿಕ್ಕೃತ್ಯ ಜೇಜೀಯತೇ
ಯಸ್ಯ ಶ್ರೀವದನಾಂಬುಜಸ್ಯ ಸುಷಮಾ ರಾಕೇಂದುಕೋಟೀರಪಿ ।
ಸೌಂದರ್ಯಂ ಚ ಮನೋಭವಾನಪಿ ಬಹೂನ್ ಕಾಂತಿಶ್ಚ ಕಾದಂಬಿನೀಂ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಗಲಮ್ ॥ ೨ ॥

ನಾನಾರತ್ನಕಿರೀಟಕುಂಡಲಮುಖೈರ್ಭೂಷಾಗಣೈರ್ಭೂಷಿತಃ
ಶ್ರೀಮತ್ಕೌಸ್ತುಭರತ್ನಭವ್ಯಹೃದಯಃ ಶ್ರೀವತ್ಸಲ್ಲಾಂಛನಃ ।
ವಿದ್ಯುದ್ವರ್ಣಸುವರ್ಣವಸ್ತ್ರರುಚಿರೋ ಯಃ ಶಂಖಚಕ್ರಾದಿಭಿಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೩ ॥

ಯತ್ಫಾಲೇ ಮೃಗನಾಭಿಚಾರುತಿಲಕೋ ನೇತ್ರೇಽಬ್ಜಪತ್ರಾಯಿತೇ
ಕಸ್ತೂರೀಘನಸಾರಕೇಸರಮಿಲಚ್ಛ್ರೀಗಂಧಸಾರೋ ದ್ರವೈಃ ।
ಗಂಧೈರ್ಲಿಪ್ತತನುಃ ಸುಗಂಧಸುಮನೋಮಾಲಾಧರೋ ಯಃ ಪ್ರಭುಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೪ ॥

ಏತದ್ದಿವ್ಯಪದಂ ಮಮಾಸ್ತಿ ಭುವಿ ತತ್ ಸಂಪಶ್ಯತೇತ್ಯಾದರಾ-
ದ್ಭಕ್ತೇಭ್ಯಃ ಸ್ವಕರೇಣ ದರ್ಶಯತಿ ಯದ್ದೃಷ್ಟ್ವಾಽತಿಸೌಖ್ಯಂ ಗತಃ ।
ಏತದ್ಭಕ್ತಿಮತೋ ಮಹಾನಪಿ ಭವಾಂಭೋಧಿರ್ನದೀತಿ ಸ್ಪೃಶನ್
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೫ ॥

ಯಃ ಸ್ವಾಮೀ ಸರಸಸ್ತಟೇ ವಿಹರತೋ ಶ್ರೀಸ್ವಾಮಿನಾಮ್ನಃ ಸದಾ
ಸೌವರ್ಣಾಲಯಮಂದಿರೋ ವಿಧಿಮುಖೈರ್ಬರ್ಹಿರ್ಮುಖೈಃ ಸೇವಿತಃ ।
ಯಃ ಶತ್ರೂನ್ ಹನಯನ್ ನಿಜಾನವತಿ ಚ ಶ್ರೀಭೂವರಾಹಾತ್ಮಕಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೬ ॥

ಯೋ ಬ್ರಹ್ಮಾದಿಸುರಾನ್ ಮುನೀಂಶ್ಚ ಮನುಜಾನ್ ಬ್ರಹ್ಮೋತ್ಸವಾಯಾಗತಾನ್
ದೃಷ್ಟ್ವಾ ಹೃಷ್ಟಮನಾ ಬಭೂವ ಬಹುಶಸ್ತೈರರ್ಚಿತಃ ಸಂಸ್ತುತಃ ।
ತೇಭ್ಯೋ ಯಃ ಪ್ರದದಾದ್ವರಾನ್ ಬಹುವಿಧಾನ್ ಲಕ್ಷ್ಮೀನಿವಾಸೋ ವಿಭುಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೭ ॥

ಯೋ ದೇವೋ ಭುವಿ ವರ್ತತೇ ಕಲಿಯುಗೇ ವೈಕುಂಠಲೋಕಸ್ಥಿತೋ
ಭಕ್ತಾನಾಂ ಪರಿಪಾಲನಾಯ ಸತತಂ ಕಾರುಣ್ಯವಾರಾಂನಿಧಿಃ ।
ಶ್ರೀಶೇಷಾಖ್ಯಮಹೀಧ್ರಮಸ್ತಕಮಣಿರ್ಭಕ್ತೈಕಚಿಂತಾಮಣಿಃ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೮ ॥

ಶೇಷಾದ್ರಿಪ್ರಭುಮಂಗಲಾಷ್ಟಕಮಿದಂ ತುಷ್ಟ್ಯೇನ ಯಸ್ಯೇಶಿತುಃ
ಪ್ರೀತ್ಯರ್ಥಂ ರಚಿತಂ ರಮೇಶಚರಣದ್ವಂದ್ವೈಕನಿಷ್ಠಾವತಾ ।
ವೈವಾಹ್ಯಾದಿಶುಭಕ್ರಿಯಾಸು ಪಠಿತಂ ಯೈಃ ಸಾಧು ತೇಷಾಮಪಿ
ಶ್ರೀಮದ್ವೇಂಕಟಭೂಧರೇಂದ್ರರಮಣಃ ಕುರ್ಯಾದ್ಧರಿರ್ಮಂಗಲಮ್ ॥ ೯ ॥

॥ ಇತಿ ಶ್ರೀವಾದಿರಾಜತೀರ್ಥಶ್ರೀಚರಣಕೃತಂ ಶ್ರೀವೇಂಕಟೇಶಮಂಗಲಾಷ್ಟಕಮ್-೧ ॥

*****

## ೨. ಶ್ರೀವೇಂಕಟೇಶಮಂಗಲಾಷ್ಟಕಮ್ - ೨

ಜಂಬೂದ್ವೀಪಗಶೇಷಶೈಲಭುವನಃ ಶ್ರೀಜಾನಿರಾದ್ಯಾತ್ಮಜಃ
ತಾರ್ಕ್ಷ್ಯಾಹೀಶಮುಖಾಸನಸ್ತ್ರಿಭುವನಸ್ಥಾಶೇಷಲೋಕಪ್ರಿಯಃ ।
ಶ್ರೀಮತ್ಸ್ವಾಮಿಸರಃಸುವರ್ಣಮುಖರೀಸಂವೇಷ್ಟಿತಃ ಸರ್ವದಾ
ಶ್ರೀಮದ್ವೇಂಕಟಭೂಪತಿರ್ಮಮ ಸುಖಂ ದದ್ಯಾತ್ ಸದಾ ಮಂಗಲಮ್ ॥ ೧ ॥

ಸಂತಪ್ತಾಮಲಜಾತರೂಪರಚಿತಾಗಾರೇ ನಿವಿಷ್ಟಃ ಸದಾ
ಸ್ವರ್ಗದ್ವಾರಕವಾಟತೋರಣಯುತಃ ಪ್ರಾಕಾರಸಪ್ತಾನ್ವಿತಃ ।
ಭಾಸ್ವತ್ಕಾಂಚನತುಂಗಚಾರುಗರುಡಸ್ತಂಭೇ ಪತತ್ಪ್ರಾಣಿನಾಂ
ಸ್ವಪ್ನೇ ವಕ್ತಿ ಹಿತಾಹಿತಂ ಸುಕರುಣೋ ದದ್ಯಾತ್ ಸದಾ ಮಂಗಲಮ್ ॥ ೨ ॥

ಅತ್ಯುಚ್ಚಾದ್ರಿವಿಚಿತ್ರಗೋಪುರಗಣೈಃ ಪೂರ್ಣೈಃ ಸುವರ್ಣಾಚಲೈ-
ರ್ವಿಸ್ತೀರ್ಣಾಮಲಮಂಟಪಾಯುತಯುತೈರ್ನಾನಾವನೈರ್ನಿರ್ಭಯೈಃ ।
ಪಂಚಾಸ್ಯೇಭವರಾಹಖಡ್ಗಮೃಗಶಾರ್ದೂಲಾದಿಭಿಃ ಶ್ರೀಪತಿ-
ರ್ನಿತ್ಯಂ ವೇದಪರಾಯಣಸುಕೃತಿನಾಂ ದದ್ಯಾತ್ ಸದಾ ಮಂಗಲಮ್ ॥ ೩ ॥

